# ಕಲ್ಯಾಣ ಚಾಲುಕ್ಯರ ಕಾಲದ ಬಿರುದಾವಳಿಗಳು

(ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)


ಸಂಶೋಧಕಿ

ಪಾಟೀಲ ಅಕ್ಕಮ್ಮ ನೀಲಕಂಠಗೌಡ

ಮಾರ್ಗದರ್ಶಕರು

ಡಾ. ಎಸ್.ವೈ. ಸೋಮಶೇಖರ

ಸಹಾಯಕ ಪ್ರಾಧ್ಯಾಪಕರು









ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

# ಕಲ್ಯಾಣ ಚಾಲುಕ್ಯರ ಕಾಲದ ಬಿರುದಾವಳಿಗಳು

(ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)



ಸಂಶೋಧಕಿ
ಪಾಟೀಲ ಅಕ್ಕಮ್ಮ ನೀಲಕಂಠಗೌಡ



ಮಾರ್ಗದರ್ಶಕರು
ಡಾ. ಎಸ್.ವೈ. ಸೋಮಶೇಖರ
ಸಹಾಯಕ ಪ್ರಾಧ್ಯಾಪಕರು



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೦೯-೧೦



# ಸಂಶೋಧಕರ ಪ್ರಮಾಣ ಪತ್ರ

'ಕಲ್ಯಾಣ ಚಾಲುಕ್ಯರ ಕಾಲದ ಬಿರುದಾವಳಿಗಳು' ಎಂಬ ನಿಬಂಧವನ್ನು ಸಹ ಪ್ರಾಧ್ಯಾಪಕರಾದ ಡಾ. ಎಸ್.ವೈ. ಸೋಮಶೇಖರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 15/9/2010

ಪಾಟೀಲ ಅಕ್ಕಮ್ಮ ನೀಲಕಂಠಗೌಡ
ಸಂಶೋಧಕಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

**'ಕಲ್ಯಾಣ ಚಾಲುಕ್ಯರ ಕಾಲದ ಬಿರುದಾವಳಿಗಳು'** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಪಾಟೀಲ ಅಕ್ಕಮ್ಮ ನೀಲಕಂಠಗೌಡ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: 15/9/2010

ಡಾ. ಎಸ್.ವೈ. ಸೋಮಶೇಖರ
ಸಹ ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಪರಿವಿಡಿ



ಕಲ್ಯಾಣ ಚಾಲುಕ್ಯರ ಲಾಂಛನ

ಕೃಪೆ: ಗುರುಬಸಪ್ಪ. ಬೆಳಗಲ್ಲು, ಒಂದನೇಯ ಸೋಮೇಶ್ವರನ ಜೀವನ ಮತ್ತು ಸಾಧನೆಗಳು (ಅಪ್ರಕಟಿತ ಸಂಶೋಧನಾ ಪ್ರಬಂಧ)




ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯ

ಕೃಪೆ: ಲತಮಣಿ ಬಸವರಾಜ, ಕಲ್ಯಾಣ ಚಾಲುಕ್ಯರ ಕೃಷಿ ಪದ್ಧತಿ
(ಅಪ್ರಕಟಿತ ಸಂಶೋಧನಾ ಪ್ರಬಂಧ)

# ಕಲ್ಯಾಣ ಚಾಲುಕ್ಯರ ವಂಶಾವಳಿ

- ತೈಲ-೨ (೯೭೩-೯೯೭)
  - ಸತ್ಯಾಶ್ರಯ (೯೯೭-೧೦೦೮)
  - ದಶವರ್ಮ
    - ವಿಕ್ರಮಾದಿತ್ಯ - ೫ (೧೦೦೮-೧೦೧೫)
    - ಅಯ್ಯಣ (೧೦೧೫)
    - ಜಯಸಿಂಹ-೨ (೧೦೧೫-೧೦೪೪)
      - ಸೋಮೇಶ್ವರ -೧ (೧೦೪೪-೧೦೬೮)
        - ಸೋಮೇಶ್ವರ-೨ (೧೦೬೮-೧೦೭೬)
        - ವಿಕ್ರಮಾದಿತ್ಯ-೬ (೧೦೭೬-೧೧೨೭)
          - ಸೋಮೇಶ್ವರ - ೩ (೧೧೨೭-೧೧೩೯)
            - ಜಗದೇಕಮಲ್ಲ-೨ (೧೧೩೯-೧೧೪೯)
            - ತೈಲ-೩ (೧೧೪೯-೧೧೬೨)
              - ಸೋಮೇಶ್ವರ - ೪ (೧೧೮೪-೧೧೯೮)
              - ಭೂಲೋಕಮಲ್ಲ-೨
              - ಜಗದೇಕಮಲ್ಲ-೩
        - ಜಯಸಿಂಹ -೪
      - ಜಯಸಿಂಹ-೩

## ಪ್ರಸ್ತಾವನೆ

ಕಲ್ಯಾಣ ಚಾಲುಕ್ಯರ ಮನೆತನವು ಕರ್ನಾಟಕವನ್ನು ಆಳಿದ ಪ್ರಮುಖ ಶ್ರೇಷ್ಠ ಅರಸು ಮನೆತನಗಳಲ್ಲಿ ಒಂದು. ಸುದೀರ್ಘ ಆಳ್ವಿಕೆಯಿಂದ ಕರ್ನಾಟಕ ಪರಂಪರೆಯನ್ನು ಬೆಳಸಿ ಮಹತ್ತರವಾದ ಸಾಧನೆಗಳನ್ನು ಮಾಡಿದ ಈ ಮನೆತನವು ಕ್ರಿ.ಶ. ೯೭೩ ರಿಂದ ಕ್ರಿ.ಶ.೧೧೮೯ವರೆಗೆ ಎರಡು ಶತಮಾನಗಳ ಕಾಲ ಆಳ್ವಿಕೆ ನಡೆಸಿದರು. ರಾಷ್ಟ್ರಕೂಟರನ್ನು ಮೂಲೆಗುಂಪು ಮಾಡಿ ರಾಜಕೀಯ ರಂಗವನ್ನು ಪ್ರವೇಶಿಸಿದ ಇಮ್ಮಡಿ ತೈಲಪನು ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯಕ್ಕೆ ಬುನಾದಿ ಹಾಕಿದನು. ಈ ಸಾಮ್ರಾಜ್ಯವು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರದ ಬಹುಭಾಗಗಳನ್ನು ಹೊಂದಿತ್ತು. ಬೀದರ್ ಜಿಲ್ಲೆಯ ಕಲ್ಯಾಣ ಇವರ ರಾಜಧಾನಿಯಾದ್ದರಿಂದ ಇವರು ಕಲ್ಯಾಣ ಚಾಲುಕ್ಯರೆಂದು ಹೆಸರಾದರು. ಇವರ ಅವಧಿಯಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಸಾಹಿತ್ಯ ಕ್ಷೇತ್ರದಲ್ಲಿ ವಿದ್ವತ್‌ಪೂರ್ಣ ಕೃತಿಗಳು ರಚನೆಯಾದವು. ಅಲ್ಲದೇ ವಿವಿಧ ಮಾದರಿಯ ಸುಂದರ ದೇವಾಲಯಗಳು ಸಾಮ್ರಾಜ್ಯದಾದ್ಯಂತ ನಿರ್ಮಾಣವಾದವು.

ಇತಿಹಾಸದ ಪುಟಗಳಲ್ಲಿ ರಾರಾಜಿಸುತ್ತಿರುವ ಇವರ ಚರಿತ್ರೆಯ ಬಗೆಗೆ ಹಲವಾರು ಅಧ್ಯಯನಗಳು ನಡೆದಿವೆ ಹಾಗೂ ನಡೆಯುತ್ತಲಿವೆ. ಇವರ ಆಳ್ವಿಕೆಯ ಕಾಲದಲ್ಲಿ ರಚಿತವಾದ ಅನೇಕ ಶಾಸನ ಮತ್ತು ಸಾಹಿತ್ಯಾಧಾರಗಳು ಇವರ ಚರಿತ್ರೆಯನ್ನು ಬಿಚ್ಚಿಡುವುದರೊಂದಿಗೆ ಈ ಮನೆತನಕ್ಕಿರುವ ಗೌರವ ಪ್ರತಿಷ್ಠೆಗಳನ್ನು ಹೊರಗೆಡಹುತ್ತವೆ. ಈ ಎಲ್ಲ ಸಾಕ್ಷ್ಯಾಧಾರಗಳಿಂದ ದೊರೆಯುವ ಮಾಹಿತಿಯುನ್ವಯ ಅಂದಿನ ಅರಸರು, ಮಾಂಡಲಿಕರು, ವೀರಯೋಧರು, ರಾಣಿಯರು, ಇತರ ಗಣ್ಯವ್ಯಕ್ತಿಗಳಿಗೆ ನೀಡಲಾದ ಬಿರುದುಗಳ ಮೂಲಕ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಮಹದೋದ್ದೇಶ ಪ್ರಸ್ತುತ ಅಧ್ಯಯನದ್ದಾಗಿದೆ. ಬಿರುದಾವಳಿಗಳಿಂದ ಇಡೀ ಮನೆತನದ

ಚರಿತ್ರೆಯನ್ನು ಅರಿಯಲು ಸಾಧ್ಯವಿದೆ. ಇವು ಮಹತ್ವದ ಆಕರಗಳೂ ಹೌದು. ಈ ಬಿರುದಾವಳಿಗಳಿಂದ ಅರಸನ ಶೌರ್ಯ–ಪರಾಕ್ರಮ, ಗುಣವಿಶೇಷತೆ ಮತ್ತು ವ್ಯಕ್ತಿತ್ವ ಸಾಧನೆಗಳನ್ನು ಅರಿಯಬಹುದಾಗಿದೆ. ವಂಶಪರಂಪರೆಯಾಗಿ ಬಂದ ಬಿರುದುಗಳನ್ನು ಪ್ರಶಸ್ತಿಗಳೆಂದು, ಸ್ವಯಾರ್ಜಿತವಾಗಿ ಬಂದವುಗಳನ್ನು ಬಿರುದುಗಳೆಂದು ಸೌಲಭ್ಯಕ್ಕಾಗಿ ಕರೆಯಬಹುದು. ಉದಾ:"ಶ್ರೀ ಪೃಥ್ವಿವಲ್ಲಭ ಮಹಾರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜೆಯರಾಜ್ಯ ಮುತ್ತರೋತ್ತರಾಭಿವ್ರಿರ್ಧ್ಧಿ ಪ್ರವರ್ಧಮಾನ ಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ" ಎಂದು ಬರುತ್ತದೆ. ಇಲ್ಲಿ ಬರುವ ಸಮಸ್ತ ಪ್ರಶಸ್ತಿ ಪಿತ್ರಾರ್ಜಿತವಾದುದಾಗಿದೆ. ಪ್ರತಿಯೊಬ್ಬ ಅರಸನು ಸರ್ವೇಸಾಮಾನ್ಯವಾಗಿ ಈ ಪ್ರಶಸ್ತಿಗಳನ್ನು ಧರಿಸಿದ್ದಾನೆ. ಆದರೆ ತನ್ನ ವ್ಯಕ್ತಿತ್ವ, ಸಾಧನೆ, ಪರಕ್ರಾಮಗಳಿಂದ ಗಳಿಸಿದವುಗಳನ್ನು ಬಿರುದುಗಳೆಂದು ಕರೆಯಬಹುದು. ಉದಾ: ತೈಲಪನಿಗೆ ಅಹವಮಲ್ಲ, ನೂರ್ಮಡಿ ತೈಲ, ಗೂರ್ಜರ ಭಯಜ್ವರ– ಹೀಗೆ ಆಯಾ ಅರಸರು ತಮ್ಮ ಸಾಧನೆಗಳ ಮುಖಾಂತರ ಅನೇಕ ವಿಧದ ಬಿರುದುಗಳನ್ನು ಧರಿಸಿದ್ದಾರೆ. ಈ ಬಿರುದುಗಳಲ್ಲಿ ಎರಡು ಪ್ರಕಾರಗಳನ್ನು ಕಾಣಬಹುದು.

ಮೊದಲನೆಯದು: ಸ್ವ ಸಾಮರ್ಥ್ಯದ ಮೇಲೆ ಗಳಿಸಿದವು.

ಎರಡನೆಯದು: ಸಾಧನೆಯನ್ನು ಮೆಚ್ಚಿ ನೀಡಲ್ಪಟ್ಟ ಬಿರುದುಗಳು.

ಮೊದಲನೆಯ ಬಿರುದುಗಳು ಅವನ ಶಕ್ತಿ, ರೂಪ, ಯುದ್ಧ, ವಿಜಯ, ಆಸಕ್ತಿ, ಅವನಿಗೆ ವಹಿಸಿದ ಹೊಣೆ ಇತ್ಯಾದಿಗಳನ್ನು ಒಳಗೊಂಡಿರುತ್ತವೆ. ಎರಡನೆಯದು ವಿವಿಧ ಸಂದರ್ಭಕ್ಕನುಸಾರವಾಗಿ ಅಂದರೆ ಯುದ್ಧದಲ್ಲಿ ಜಯ ಹೊಂದಿದರೆ ಅವನ ಶೌರ್ಯ ಮೆಚ್ಚಿ ಬಿರುದುಗಳನ್ನು ನೀಡುತ್ತಿದ್ದರು. ಹೀಗೆ ಒಂದು ಸಾಮ್ರಾಜ್ಯದ ಚರಿತ್ರೆಯಲ್ಲಿ ಆದರ್ಶಮಯವಾದ ಧಾರ್ಮಿಕ ವೈಶಾಲ್ಯ, ಅರಸ ಮತ್ತು ಪ್ರಜೆಗಳ ಬಾಂಧವ್ಯ, ಅರಸರಿಗಾಗಿ ಸಾಮಾನ್ಯ ಪ್ರಜೆಗಳು ನೆತ್ತರನ್ನು ಸುರಿಸಿದ್ದು ಮುಂತಾದ ವಿಷಯಗಳನ್ನು ಒಳಗೊಂಡಿದುದು ಬಿರುದಾವಳಿಗಳಲ್ಲಿ ಗಮನಿಸಬಹುದು. ಬಿರುದುಗಳು ಅರಸರ ವಿಲಾಸ ಪ್ರಜ್ಞೆಯನ್ನು ಬಿಂಬಿಸುತ್ತವೆ. ಇಮ್ಮಡಿ ಜಯಸಿಂಹ ಮಲ್ಲಿಕಾವೇದ ಎಂಬ ಬಿರುದನ್ನು ಧರಿಸಿದ್ದು ಇದರ ಅರ್ಥ ಮಲ್ಲಿಗೆಯ ಸುವಾಸನೆಯನ್ನು ಹರಡುವ ಕೀರ್ತಿಯುಳ್ಳವನು ಎಂದು ತಿಳಿಸುತ್ತದೆ. ಈ ಹೂವನ್ನು ಅವನು ಕೈಯಲ್ಲಿ ಅಥವಾ ಕಿವಿಯಲ್ಲಿ ಧರಿಸುತ್ತಿದ್ದನು. ಇದರಿಂದ ನಮಗೆ ಇವನಿಗೆ ಮಲ್ಲಿಗೆಯ ಹೂ ಪ್ರಿಯವೆಂದು ತಿಳಿಯುತ್ತದೆ. ಇಂತಹ ಬಿರುದುಗಳನ್ನು ರಾಜರಂತೆ, ರಾಣಿಯರೂ ಧರಿಸಿದ್ದಾರೆ.

ಇನ್ನೂ ಕೆಲವು ಬಿರುದುಗಳು ವ್ಯಕ್ತಿಗಳ ಗುಣ ಸ್ವಭಾವವನ್ನು ಹೇಳುತ್ತವೆ. ಕಲ್ಯಾಣ ಚಾಲುಕ್ಯ ದಶವರ್ಮನ ಮಗಳು, ಜಯಸಿಂಹನ ಸಹೋದರಿಯಾದ ಅಕ್ಕಾದೇವಿ "ಗುಣದ

ಬೆಡಂಗಿ", "ರಣಭೈರವಿ", "ಉಚ್ಚಂಡ ರಣ ಭೈರವಿ", ಎಂಬ ಬಿರುದುಗಳನ್ನು ಹೊಂದಿದ್ದಳು. ಆರನೇ ವಿಕ್ರಮಾದಿತ್ಯನ ರಾಣಿ ಪದ್ಮಲದೇವಿ 'ದಾನವಿನೋದ' ಎಂಬ ಬಿರುದನ್ನು ಹೊಂದಿದ್ದು, ಇವು ಅವರ ನೈತಿಕತೆಯನ್ನು ಮೆರೆಯುವ ಮೊದಲಾದ ಗುಣ ಸ್ವಭಾವಗಳ ತಿಳಿಸುತ್ತವೆ. ಹೀಗೆ ಬೇರೆ ಬೇರೆ ಹವ್ಯಾಸ ಬಗೆಬಗೆಯ ಕಾರ್ಯಗಳಿಂದಾಗಿ ವಿವಿಧ ತೆರನಾದ ಬಿರುದುಗಳನ್ನು ಧರಿಸಿದ್ದುದು ಶಾಸನಗಳಿಂದ ತಿಳಿದುಬರುತ್ತದೆ.

ಸ್ವತಃ ಗಳಿಸಿದ ಬಿರುದುಗಳು ಅಂದರೆ ಯುದ್ಧದ ಸಮಯದಲ್ಲಿ ಇಬ್ಬರು ಅರಸರ ಮಧ್ಯೆ ಸ್ಪರ್ಧೆ ನಡೆದು ಅದರಲ್ಲಿ ಗೆದ್ದವನು ಸೋತವನ ಬಿರುದುಗಳನ್ನು ಬಲಾತ್ಕಾರವಾಗಿ ಕಸಿದುಕೊಂಡು ತಮ್ಮ ಪ್ರಶಸ್ತಿಗಳ ಜೊತೆಗೆ ಅವುಗಳನ್ನು ಧರಿಸುತ್ತಾನೆ. ಆರನೇ ವಿಕ್ರಮಾದಿತ್ಯ ಮತ್ತು ಎರಡನೇ ಜಗದೇಕಮಲ್ಲ 'ಪೆರ್ಮಾಡಿ' ಎಂಬ ಗಂಗರ ಬಿರುದನ್ನು ಕಸಿದುಕೊಂಡು ಇವರು ಧರಿಸಿದ್ದಾರೆ. ಹೀಗೆ ತಮ್ಮ ಶೌರ್ಯ–ಪರಾಕ್ರಮ, ಸಾಧನೆಗಳಿಂದ ಪ್ರತಿಯೊಬ್ಬರು ತಮ್ಮದೇ ಆದ ಬಿರುದುಗಳನ್ನು ಹೊಂದಿದ್ದಾರೆ.

ಎರಡನೆಯ ತರಹದ ಬಿರುದುಗಳು ಸಾಧನೆಯನ್ನು ಮೆಚ್ಚಿ ನೀಡಲ್ಪಟ್ಟ ಬಿರುದುಗಳು. ಇವು ಚಕ್ರವರ್ತಿಯ ಸಾಧನೆಯನ್ನು ಮೆಚ್ಚಿ ಅಥವಾ ಆತನಿಗೆ ಗೌರವ ಸೂಚಕವಾಗಿ ನೀಡಲ್ಪಟ್ಟ ಬಿರುದುಗಳಾಗಿವೆ. ಚಕ್ರವರ್ತಿ ತನ್ನ ಕೈಕೆಳಗಿನವರ ಸಾಧನೆ ಪರಾಕ್ರಮಗಳನ್ನು ಮೆಚ್ಚಿ ಅವರಿಗೆ ದಯಪಾಲಿಸಿದ ಬಿರುದುಗಳಾಗಿವೆ. ಇಂತಹ ಒಂದು ಉಲ್ಲೇಖವನ್ನು ಹೊಟ್ಟೂರು ಶಾಸನದಲ್ಲಿ ವಿಕ್ರಮಾದಿತ್ಯನು ಗೋಡುವರ ಮಾರಗಾವುಂಡನ ಮಗನಾದ 'ಕೇಶಿ" ಯನ್ನು ಮೆಚ್ಚಿ, ನೆಚ್ಚಿ ತಮಗೆ ಮಗನು ಈತನೆ ಎಂದು 'ಚಾಳುಕ್ಯ ಗಂಗ ಪೆರ್ಮಾಡಿ' ಎಂಬ ಹೆಸರನ್ನು ಕೊಡುತ್ತಾನೆ. ಇದರ ವಿವರಣೆ ಶಾಸನದಲ್ಲಿ ಹೀಗಿದೆ:

"ಮಗನೆನಗೀತನೆ ಚಾಳುಕ್ಯ ಗಂಗಪೆರ್ಮಾಡಿಯೆಂದು ಪೆಸರ್ಗೊಟ್ಟಂ ಕೇಸಿಗೆ ಮೆಚ್ಚಿ ನೆಚ್ಚಿ ಚಾಳುಕ್ಯ ಗಂಗಪೆರ್ಮಾಡಿನೃಪಂ".

ಇಂತಹ ಬಿರುದುಗಳು ಗೌರವದ ಸೂಚಕಗಳಾಗಿವೆ. ಅನೇಕ ಮಹಾಮಂಡಳೇಶ್ವರರು, ಅಧಿಕಾರಿಗಳು ವಿಕ್ರಮಾದಿತ್ಯನಿಂದ 'ತ್ರಿಭುವನಮಲ್ಲ'ನ ಬಿರುದನ್ನು ಪಡೆದು ಧರಿಸಿದ್ದಾರೆ.

ಇನ್ನು ಮಹಿಳೆಯರ ಬಿರುದುಗಳಲ್ಲಿ ವಿದ್ವತ್ತಿನ ಉಲ್ಲೇಖಗಳು ಕೆಲವೊಮ್ಮೆ ದೊರೆಯುತ್ತಿರುವುದರಿಂದ ಅರಮನೆಯಂಥ ಉನ್ನತ ವರ್ಗದ ಕುಟುಂಬಗಳಲ್ಲಿ ವಿದ್ಯಾಭ್ಯಾಸಕ್ಕೆ, ಅದಕ್ಕಿಂತ ಹೆಚ್ಚು ನೃತ್ಯ ಸಂಗೀತಾದಿ ಲಲಿತಕಲೆಗಳ ಅಭ್ಯಾಸ ನಡೆಯುತ್ತಿರಬೇಕು ಎಂದು ಬಿರುದಾವಳಿಗಳಿಂದ ತಿಳಿಯಬಹುದು. ಕಲ್ಯಾಣ ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಪತ್ನಿ ಕೇತಲದೇವಿಯನ್ನು "ಶ್ರೀ ಮದಭಿನವ ಸರಸ್ವತಿ ಹಿರಿಯ ಕೇತಲದೇವಿಯರು' ಎಂದು ಬಣ್ಣಿಸಲಾಗಿದೆ.

'ಶ್ರೀಮದಭಿನವ ಸರಸ್ವತಿ ಎಂಬ ಬಿರುದು ನೃತ್ಯ ಮತ್ತು ನಾಟ್ಯಗಳಲ್ಲಿ ಉತ್ಕೃಷ್ಟವಾದ ಪಾಂಡಿತ್ಯವನ್ನು ಹೊಂದಿದವರಿಗೆ ಮಾತ್ರ ಸಲ್ಲುವಂತಹದು. (ಇಂದಿಗೂ ಈ ರೀತಿಯ ಬಿರುದಿಗೆ ಅದೇ ಮಾನ್ಯತೆ ಇದೆ.) ಹೀಗೆ ಬಿರುದಾವಳಿಗಳಲ್ಲಿ ನೃತ್ಯದ ಉಲ್ಲೇಖಗಳು ಕಂಡುಬರುತ್ತದೆ. ರಾಣಿಯರಂತೆ ರಾಜರು ಸಹ ನೃತ್ಯದಲ್ಲಿ ಪರಿಣಿತರಾಗಿದ್ದರು. ಕ್ರಿ.ಶ. ೭೫೩-೫೪ ರ ಎರಡನೇ ಕೀರ್ತಿವರ್ಮನ ಒಂದು ಶಾಸನದಲ್ಲಿ ಚಾಲುಕ್ಯ ರಾಜವಂಶಾವಳಿಯನ್ನು ವಿವರಿಸುವಲ್ಲಿ ವಿಕ್ರಮಾದಿತ್ಯನನ್ನು ಹೆಸರಿಸುವಾಗ 'ನಟ ಪಾದ ಯುಗ್ಮ' ಎಂಬ ಬಿರುದಿನಿಂದ ಅವನನ್ನು ಗುರುತಿಸಲಾಗಿದೆ. 'ನಟ 'ಪಾದಯುಗ್ಮ' ಪದವು ಅಭಿನಯ ಮತ್ತು ನೃತ್ಯ ಎರಡರಲ್ಲೂ ಪಾರಂಗತನಾಗಿ ಪ್ರಕಾಶಿಸುವವನು ಎಂಬ ಅರ್ಥವಲ್ಲದೆ, ಶಾಸನದಲ್ಲಿ ವಿವರವಾಗಿ ವಾಕ್ಯಗಳನ್ನು ಗಮನಿಸಿದಾಗ ವಿಕ್ರಮಾದಿತ್ಯನು ತನ್ನ ಸಾಮಂತರನ್ನು ನಿಂತಲ್ಲಿ ನಿಲ್ಲಲು ಬಿಡದೆ ಸದಾ ಅವರನ್ನು ತನಗೆ ಬೇಕಾದ ಹಾಗೆ ಕುಣಿಸುತ್ತಿದ್ದನು ಎಂಬ ಅರ್ಥವು ದೊರೆಯುತ್ತದೆ. ಕೇವಲ ಮೂರು ಪದಗಳಲ್ಲಿ ವಿಕ್ರಮಾದಿತ್ಯನ ಪಾಂಡಿತ್ಯವನ್ನು ಆತನ ಆಡಳಿತ ವೈಖರಿಯನ್ನು ತಿಳಿಸಿರುವ ಶಾಸನ ಕವಿಯ ಕವಿತಾ ರಚನೆಯ ಶೈಲಿ ವಿಶಿಷ್ಟವಾದದ್ದು.

## ಅಧ್ಯಯನದ ಉದ್ದೇಶ

ಪ್ರಸುತ್ತ ಅಧ್ಯಯನದ ಶೀರ್ಷಿಕೆ "ಕಲ್ಯಾಣ ಚಾಲುಕ್ಯರ ಕಾಲದ ಬಿರುದಾವಳಿಗಳು" ಎಂಬುದಾಗಿದ್ದು. ಚಾಲುಕ್ಯರ ಎಲ್ಲ ಬಿರುದಾವಳಿಗಳ ದಾಖಲೀಕರಣ, ಅವುಗಳ ಹಿನ್ನಲೆ ಹಾಗೂ ಸಾಂಸ್ಕೃತಿಕ ಬದುಕನ್ನೂ ಬಿಚ್ಚಿಡುವುದು ಈ ಅಧ್ಯಯನದ ಮುಖ್ಯ ಉದ್ದೇಶ.

ಕಲ್ಯಾಣ ಚಾಲುಕ್ಯರ ಆಡಳಿತದ ಚುಕ್ಕಾಣಿಯಲ್ಲಿ ಅವರ ಪಾತ್ರವೇನು? ಹಾಗೂ ತಮ್ಮ ಶೌರ್ಯ-ಪರಾಕ್ರಮಗಳಿಂದ ಸಮಕಾಲೀನ ಅರಸರನ್ನು ಸೋಲಿಸಿ ರಕ್ಷಣೆ ಹಾಗೂ ಸಾಮ್ರಾಜ್ಯ ವಿಸ್ತರಣೆ ಮಾಡಿ ಯಶಸ್ಸು ಪಡೆದುಕೊಂಡಿದ್ದುಂಟು. ಈ ಬಗೆಯ ಸಾಧನೆಯನ್ನು ಬಿರುದುಗಳ ಮುಖಾಂತರ ನೋಡಬಹುದಾಗಿದೆ. ಇವು ಅರಸರ ಮಾಂಡಲಿಕರ, ರಾಣಿಯರ, ಕವಿಗಳ, ಇತರ ಗಣ್ಯ ವ್ಯಕ್ತಿಗಳ ಬದುಕನ್ನು ಬಿಚ್ಚಿಡುವ ಬಿರುದುಗಳಾಗಿವೆ. ಹೀಗೆ ಬಿರುದುಗಳು ಆಯಾ ರಾಜರ, ಹಿನ್ನಲೆ, ಸಾಧನೆ ಮತ್ತು ಸ್ಥಾನಮಾನಗಳ ಜೊತೆಗೆ ರಾಜಪ್ರಭುತ್ವವನ್ನು ನಾಡಿನಾದ್ಯಂತ ಸ್ಥಾಪಿಸುವ ಉದ್ದೇಶವನ್ನು ಹೊಂದಿದ್ದವೆಂಬುದು ಗಮನಾರ್ಹ ಸಂಗತಿ.

ಮೇಲಿನ ಉದ್ದೇಶಗಳಲ್ಲದೆ, ಬಿರುದುಗಳು ಇತಿಹಾಸ ಅಧ್ಯಯನದಲ್ಲಿ ಹೇಗೆ ಪ್ರಮುಖ ಆಕರಗಳಾಗಿ ಪಾತ್ರ ವಹಿಸುತ್ತವೆ. ಹಾಗೂ ಬಿರುದಾವಳಿಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಏಕೆ ನೀಡಲಾಯಿತು? ಅಂದಿನ ರಾಜಪ್ರಭುತ್ವದ ಕಲ್ಪನೆ ಹೇಗಿತ್ತು? ಈ ಎಲ್ಲ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಯನವು "ಕಲ್ಯಾಣ ಚಾಲುಕ್ಯರ ಕಾಲದ ಬಿರುದಾವಳಿಗಳು" ಎಂಬ ಶೀರ್ಷಿಕೆಯಡಿಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಬಿರುದಾವಳಿಗಳ ವ್ಯವಸ್ಥಿತ ಹಾಗೂ ಶಾಸ್ತ್ರೀಯ ಅಧ್ಯಯನದ ಮೂಲಕ ಅಂದಿನ ಸಾಂಸ್ಕೃತಿಕ ಬದುಕಿನ ಮುಖ್ಯ ಸಂಗತಿಗಳನ್ನು ಹೊರಗೆಡುವುದು ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ಸಮೀಕ್ಷೆ:**

ಕಲ್ಯಾಣ ಚಾಲುಕ್ಯರಿಗೆ ಸಂಬಂಧಿಸಿದಂತೆ ಸಾಕಷ್ಟು ಅಧ್ಯನಗಳು ನಡೆದಿವೆ. ದೇವಾಲಯಗಳು, ಮೂರ್ತಿ ಶಿಲ್ಪಗಳು, ಮಂತ್ರಿಮಾಂಡಲಿಕರು, ಸಾಮಾಜಿಕ, ಆರ್ಥಿಕ ಹಾಗೂ ಸಾಮ್ರಾಜ್ಯದ ಇತಿಹಾಸ ಕುರಿತಂತೆ ಕೆಲವು ಪ್ರಬಂಧಗಳು ಮತ್ತು ಬಿಡಿ ಲೇಖನಗಳು ಪ್ರಕಟಗೊಂಡಿರುವುದನ್ನು ಗಮನಿಸಬಹುದು. ಎಫಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳು, Annual Report of South Indian Epigraphy South Indian Inscriptions, ಕನ್ನಡ ವಿಶ್ವವಿದ್ಯಾಲಯದ ಶಾಸನದ ಸಂಪುಟಗಳು, ಶಾಸನ ಸಾಹಿತ್ಯ ಸಂಚಯ, ಇಷ್ಟೆ ಅಲ್ಲದೆ ರನ್ನನ **ಗದಾಯುದ್ಧ**, ಮೂರನೇ ಸೋಮೇಶ್ವರನ **ಮಾನಸೊಲ್ಲಾಸ**, ನಯಸೇನನ **ಧರ್ಮಾಮೃತ**, ಬಿಲ್ಹಣನ **ವಿಕ್ರಮಾಂಕದೇವ ಚರಿತೆ**, ಪಂಪನ **ಆದಿಪುರಾಣ**, ನೃಪತುಂಗನ **ಕವಿರಾಜಮಾರ್ಗ**, ಆಲೂರು ವೆಂಕಟರಾಯರ **ಕರ್ನಾಟಕ ಗತವೈಭವ ಪ್ರಬುದ್ಧ ಕರ್ನಾಟಕ**, ನಿಯತಕಾಲಿಕೆಗಳು, ಇತ್ಯಾದಿ ಸಾಹಿತ್ಯಿಕ ಆಕರಗಳು ದೊರೆಯುತ್ತವೆ.

ಎಂ. ಚಿದಾನಂದ ಮೂರ್ತಿಯವರ 'ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ' (೧೯೯೯), ಗೋಪಾಲರಾವ್ ಎಚ್.ಎಸ್. ಅವರ ಶಾಸನಗಳ ಹಿನ್ನೆಲೆಯಲ್ಲಿ 'ಕಲ್ಯಾಣ ಚಾಲುಕ್ಯರ ದೇವಾಲಯ' (೧೯೯೩) ಇವು ಕಲ್ಯಾಣ ಚಾಲುಕ್ಯರ ಬಿರುದುಗಳ ಬಗೆಗೆ ಅಲ್ಪ ಮಾಹಿತಿ ನೀಡುತ್ತವೆ. ಜೆ.ಎಂ.ನಾಗಯ್ಯರ 'ಆರನೆಯ ವಿಕ್ರಮಾದಿತ್ಯನ ಶಾಸನಗಳಲ್ಲಿನ ವಿಷಯಗಳನ್ನು ತಿಳಿಸುತ್ತಿದ್ದು, ಆತನ ಹಾಗೂ ಆತನ ರಾಣಿಯರ ಮತ್ತು ಅಧಿಕಾರಿಗಳ ಬಿರುದುಗಳನ್ನು ತಿಳಿಸುತ್ತದೆ. ಹಾಗೆಯೇ ದಿನಕರ ದೇಸಾಯಿಯವರ 'ಕಲ್ಯಾಣ ಚಾಲುಕ್ಯರ ಕಾಲದ ಮಹಾಮಂಡಳೇಶ್ವರರು' ಎಂಬ ಕೃತಿಯಲ್ಲಿ ಮಹಾಮಂಡಳೇಶ್ವರ ಸಮಗ್ರ ಚಿತ್ರಣ ಕಂಡುಬರುತ್ತವೆ. ಇವೆಲ್ಲವುಗಳು ಪ್ರಸ್ತುತ ಅಧ್ಯಯನಕ್ಕೆ ಸಹಾಯಕ ಆಕರಗಳಾಗಿವೆ.

ಮಹಾನಂದಾ ಎಂ. ಗೋಂದಿ "ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ಆರ್ಥಿಕ ಸಾಮಾಜಿಕ ಸ್ಥಿತಿ", ಹಾಗೂ ಡಾ.ಎಂ.ಎಸ್. ನಾಗರಾಜ್‌ರಾವ್ "The Chalukya of Kalyana", ಡಾ. ಬಾ.ರಾ.ಗೋಪಾಲ್‌ರವರು "The Chalukya of Kalyana and Kalacharies" ಹಾಗೂ ಕೆ.ವಿ ರಮೇಶರ ತುಳುನಾಡಿನ ಅಧ್ಯಯನ, ಎ.ಎನ್. ಗುರವ ಅವರ 'ತರ್ದವಾಡಿನಾಡು',

ಧನವಂತ ಹಾಜವಗೋಳರ "ಮುಳುಗುಂದನಾಡು: ಒಂದು ಅಧ್ಯಯನ" ಎಂಬ ಪಿಎಚ್.ಡಿ ಪ್ರಬಂಧಗಳು ಕಲ್ಯಾಣ ಚಾಲುಕ್ಯ ಬಗೆಗಿನ ಪ್ರಮುಖ ಅಧ್ಯಯನಗಳಾಗಿವೆ.

ಒಟ್ಟಾರೆಯಾಗಿ ಈ ಮೇಲಿನ ಅಧ್ಯಯನಗಳನ್ನು ಗಮನಿಸಿದಾಗ ಇವುಗಳಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು, ಸಾಮ್ರಾಜ್ಯದ ಇತಿಹಾಸ, ಮಹಾಮಂಡಳೇಶ್ವರರು ಅವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಕುರಿತು ಉಲ್ಲೇಖವಿದ್ದರೂ, ಕಲ್ಯಾಣ ಚಾಲುಕ್ಯರ ಕಾಲದ ಸಾಂಸ್ಕೃತಿಕ ಸಂಗತಿಗಳನ್ನು ಸಾರುವ ಬಿರುದಾವಳಿಗಳ ಸಮಗ್ರ ಚಿತ್ರಣ ನೀಡುವುದಿಲ್ಲ. ಆದ್ದರಿಂದ ಬಿರುದಾವಳಿಗಳ ಅಧ್ಯಯನವನ್ನು ಪ್ರತ್ಯೇಕ ಅಧ್ಯಯನಕ್ಕೊಳಪಡಿಸುವ ಮೂಲಕ ಕಲ್ಯಾಣ ಚಾಲುಕ್ಯ ಮನೆತನದ ಮೇಲೆ ಹೊಸ ಬೆಳಕನ್ನು ಚೆಲ್ಲುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

### ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ

ಪ್ರಸ್ತುತ ಅಧ್ಯಯನದಲ್ಲಿ ಕಲ್ಯಾಣ ಚಾಲುಕ್ಯರ ಅರಸರು, ಮಾಂಡಲಿಕರು, ರಾಣಿಯರು, ಕವಿಗಳು, ಹಾಗೂ ಇನ್ನಿತರ ವ್ಯಕ್ತಿಗಳು ಅವರ ಪ್ರತಿಭೆ, ಪಾಂಡಿತ್ಯ, ಶೌರ್ಯ-ಪರಾಕ್ರಮಗಳನ್ನು ಪ್ರತಿನಿಧಿಸುವ ಬಿರುದುಗಳನ್ನು ಗುರುತಿಸಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಆದುದರಿಂದ ಅಧ್ಯಯನವನ್ನು ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲಕ್ಕೆ ಸೀಮಿತಗೊಳಿಸಲಾಗಿದೆ.

### ಮಹತ್ವ

ಆಧಾರವಿಲ್ಲದೆ ಇತಿಹಾಸವಿಲ್ಲ, ಇತಿಹಾಸ ರಚನೆಗೆ ಆಧಾರಗಳು ತುಂಬಾ ಅವಶ್ಯಕ ಏಕೆಂದರೆ ಘಟನೆಗಳು ಸಂಭವಿಸಿದ ಕಾಲದಲ್ಲಿ ವ್ಯಕ್ತಿಗಳು ಸೃಷ್ಟಿಸಿದ ಮೂಲಾಧಾರಗಳನ್ನು ಸಮಕಾಲೀನ ಮೂಲಾಧಾರಗಳು ಎಂದು ಕರೆಯುತ್ತೇವೆ. ಅಂತೆಯೇ ಅರಸರ ಮಂತ್ರಿಮಾಂಡಲಿಕರು, ರಾಣಿಯರು, ಇತರ ವ್ಯಕ್ತಿಗಳಿಗೆ ಉಲ್ಲೇಖವಾದ ಬಿರುದುಗಳು ಮುಖ್ಯವಾಗಿವೆ. ಬಿರುದುಗಳು ಸೌಹಾರ್ದ ಕಾರ್ಯಗಳಿಂದ ಬಂದುವುಗಳಾಗಿವೆ. ಪ್ರತಿಯೊಂದು ಬಿರುದುಗಳು ಒಂದೊಂದು ಅರ್ಥವನ್ನು ಹೊಂದಿದ್ದು ಅವುಗಳ ಅರ್ಥವನ್ನು ವ್ಯವಸ್ಥಿತವಾಗಿ ಬಿಚ್ಚಿ ಬಿಡಿಸಿ, ವಿಮರ್ಶಿಸಿ ನೋಡಿದಾಗ ಮಾತ್ರ ತಿಳಿದುಬರುತ್ತದೆ. ಈ ಬಿರುದುಗಳಿಂದ ಸಾಮ್ರಾಜ್ಯದ ಇತಿಹಾಸ, ವ್ಯಕ್ತಿಗಳ ಗುಣಸ್ವಭಾವ, ಶೌರ್ಯ ಪರಾಕ್ರಮಗಳ ಸಾಧನೆಗಳು, ಘಟನೆಗಳು, ವಿಷಯ, ಸಾಹಿತ್ಯ, ಭಾಷೆ ಮೊದಲಾದ ಸಂಗತಿಗಳನ್ನು ಕುರಿತು ವಿವರಿಸುವ ಶಕ್ತಿಯನ್ನು ಹೊಂದಿವೆ. ಪ್ರಸ್ತುತ ಅಧ್ಯಯನವು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೀಮಿತವಾಗಿದ್ದು ಅವರ ಬಿರುದಾವಳಿಗಳನ್ನು ಒಳಗೊಂಡಿದೆ.

ಕಲ್ಯಾಣ ಚಾಲುಕ್ಯರ ಕಾಲದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಪ್ರಮುಖ ಮಹತ್ವದ ಆಕರಗಳು, ಶಾಸನಗಳು ಹಾಗೂ ಸಾಹಿತ್ಯ ಗ್ರಂಥಾಗಳಾಗಿದ್ದು ಅವರ ಸಾಮ್ರಾಜ್ಯದ ಮೇಲೆ ಬೆಳಕನ್ನು ಚೆಲ್ಲುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಎಲ್ಲ ಬಗೆಯ ಬಿರುದುಗಳನ್ನು ಅಧ್ಯಯನಕ್ಕೆ

ಒಳಪಡಿಸುವ ಮೂಲಕ ಇವರ ಕಾಲದ ಸಾಂಸ್ಕೃತಿಕ ಹಿನ್ನೆಲೆಯನ್ನು ಕಟ್ಟಿಕೊಡುವ ಉದ್ದೇಶ ಈ ಅಧ್ಯಯನದ್ದಾಗಿದೆ.

**ಅಧ್ಯಯನ ವಿಧಾನ**

ಸಂಶೋಧನೆಗೆ ಅಧ್ಯಯನ ಕ್ರಮ ಅತಿ ಮುಖ್ಯವಾದುದು. ಪ್ರಸ್ತುತ ಅಧ್ಯಯನಕ್ಕೆ ಶಾಸನಗಳು ಹಾಗೂ ಸಾಹಿತ್ಯಾಧಾರಗಳು ಪ್ರಥಮ ಆಕರಗಳಾಗಿವೆ. ಇವುಗಳನ್ನು ಸಂಗ್ರಹಿಸಿ, ಅಭ್ಯಸಿಸಿ ಅರ್ಥೈಸಲಾಗುವುದು. ಹಾಗೆಯೇ ಆನುಷಂಗಿಕ ಆಕರಗಳನ್ನು ಬಳಸಿಕೊಂಡು ಅಧ್ಯಯನದ ವಸ್ತುವಿಷಯವನ್ನು ನಿಬಂಧ ರೂಪದಲ್ಲಿ ನೀಡಲಾಗುವುದು.

**ಅಧ್ಯಯನ ಸ್ವರೂಪ**

ಪ್ರಸ್ತುತ ಅಧ್ಯಯನವನ್ನು ಅಧ್ಯಯನದ ಅನಕೂಲಕ್ಕಾಗಿ ಐದು ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದ್ದು, ಪ್ರತಿಯೊಂದು ಅಧ್ಯಾಯವು ಅವಶ್ಯಕತೆಗಳಿಗನುಸಾರವಾಗಿ ಉಪವಿಭಾಗಗಳನ್ನು ಒಳಗೊಂಡಿವೆ.

ಅಧ್ಯಯನದ ಮೊದಲನೆಯ ಅಧ್ಯಾಯವು ಉದ್ದೇಶ, ಇದುವರೆಗೂ ನಡೆದ ಅಧ್ಯಯನದ ಸಮೀಕ್ಷೆ, ವ್ಯಾಪ್ತಿ, ಅಧ್ಯಯನದ ವಿಧಾನ ಹಾಗೂ ಸ್ವರೂಪಗಳನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಚಾರಿತ್ರಿಕ ಹಿನ್ನೆಲೆಯ ವಿವರಣೆಯನ್ನು ಒದಗಿಸುವುದಾಗಿದೆ.

ಮೂರನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧದಿಸಿದಂತೆ ಬಿರುದಾವಳಿಗಳ ಅರ್ಥ, ಅರಸರ, ರಾಣಿಯರ, ಮಂತ್ರಿಮಾಂಡಲಿಕರ, ಇತರರು ಹೊಂದಿದ ಬಿರುದಾವಳಿಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬಿರುದಾವಳಿಗಳ ಸಾಂಸ್ಕೃತಿಕ ಚಿತ್ರಣ, ಸಾಹಿತ್ಯಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಬಿರುದಾವಳಿಗಳನ್ನು ವಿಶ್ಲೇಷಣೆ ಮಾಡುವ ಮೂಲಕ ಬಿರುದಾವಳಿಗಳ ಮಹತ್ವವನ್ನು ತಿಳಿಸುವುದಾಗಿದೆ. ಕೊನೆಯ ಅಧ್ಯಾಯ ಉಪಸಂಹಾರವಾಗಿದ್ದು, ಪ್ರಸ್ತುತ ಅಧ್ಯಯನದ ಸಮಗ್ರ ವಿವರಗಳನ್ನು ಸಂಕ್ಷೀಪ್ತ ರೂಪದಲ್ಲಿ ಹೇಳುವ ಪ್ರಯತ್ನ ಮಾಡಲಾಗುವುದು.

ರಾಷ್ಟ್ರಕೂಟರ ಪತನಾನಂತರ ಆಳ್ವಿಕೆಗೆ ಬಂದ ಕಲ್ಯಾಣ ಚಾಲುಕ್ಯ ಮನೆತನವು ಕ್ರಿ.ಶ. ೯೭೩ ರಿಂದ ಸುಮಾರು ೨೨೫ ವರ್ಷಗಳ ಸುಧೀರ್ಘ ಆಳ್ವಿಕೆ ನಡೆಸಿ ಐತಿಹಾಸಿಕ ಯುಗವನ್ನು ಸ್ಥಾಪಿಸಿತು. ಈ ಮನೆತನವನ್ನು ಸ್ಥಾಪಿಸಿದ ಕೀರ್ತಿ ಎರಡನೆಯ ತೈಲಪನಿಗೆ ಸಲ್ಲುತ್ತದೆ. ಇವರು ಕರ್ನಾಟಕದ ಭಾಗವನ್ನಲ್ಲದೆ ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರ ಪ್ರದೇಶಗಳ ಬಹುಭಾಗಗಳ ಮೇಲೆ ಆಳ್ವಿಕೆ ನಡೆಸಿದರಲ್ಲದೆ ರಾಷ್ಟ್ರಕೂಟರ ಕಾಲದ ಸಾಂಸ್ಕೃತಿಕ ಪರಂಪರೆಯನ್ನೇ ಮುಂದುವರಿಸಿಕೊಂಡು ಬಂದರು.

ನಂದಿಯನ್ನು ತಮ್ಮ ರಾಜಲಾಂಛನವನ್ನಾಗಿ ಮಾಡಿಕೊಂಡು ಆಳಿದ ಕಲ್ಯಾಣ ಚಾಲುಕ್ಯರು ಚಿರಸ್ಥಾಯಿಯಾಗಿ ಉಳಿಯುವಂತಹ ಸಾಂಸ್ಕೃತಿಕ ಸಾಧನೆಯನ್ನು ಕರ್ನಾಟಕದಲ್ಲಿ ಸಾಧಿಸಿದರು. ಈ ಅರಸು ಮನೆತನದಲ್ಲಿ ಬರುವ ಅರಸರಲ್ಲಿ ಎರಡನೆಯ ತೈಲಪ, ಸತ್ಯಾಶ್ರಯ, ಐದನೆಯ ವಿಕ್ರಮಾದಿತ್ಯ, ಒಂದನೆಯ ಸೋಮೇಶ್ವರ, ಎರಡನೆಯ ಜಯಸಿಂಹ, ಎರಡನೆಯ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ, ಎರಡನೆಯ ಜಗದೇಕಮಲ್ಲ, ನಾಲ್ಕನೆಯ ಸೋಮೇಶ್ವರ ಮುಂತಾದವರು ಪ್ರಮುಖರಾಗಿರುವರು.

ಚಾಲುಕ್ಯರ ಮೂಲದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಇವರು ಬಾದಾಮಿ ಚಾಲುಕ್ಯರ ವಂಶಸ್ಥರೆಂದು ತಮ್ಮ ಶಾಸನಗಳಲ್ಲಿ ಕರೆದುಕೊಂಡಿದ್ದಾರೆ. ಈ ಅಂಶವನ್ನು ಒಪ್ಪಲು ಸಾಕಷ್ಟು ಆಧಾರಗಳಿಲ್ಲ. ಇವರ ಮೂಲವು ಬಹಳ ಕಾಲದಿಂದಲೂ ವಿದ್ವಾಂಸರನ್ನು ಕಾಡುತ್ತ ಬಂದಿರುವ ಪ್ರಶ್ನೆಯಾಗಿದೆ.

ಶಾಸನಗಳಲ್ಲಿ ಇವರ ಮೂಲವನ್ನು ಕುರಿತ ಕಥನಾತ್ಮಕ ನಿರೂಪಣೆಯಿದೆ. ಚಾಲುಕ್ಯರು ಬಂದದ್ದು ಚಂದ್ರನಿಂದ. ಚಂದ್ರನು ಅತ್ರಿಯಿಂದಲು ಅತ್ರಿಯು ಬಹ್ಮನಿಂದಲೂ ಜನಿಸಿದರು. ಇನ್ನೊಂದು ಕಥೆಯ ಪ್ರಕಾರ ಮಾಂಡವ್ಯವನು ಮತ್ತು ಹಿರಣ್ಯಗರ್ಭ ಬ್ರಹ್ಮರ ವಂಶದಲ್ಲಿ ಬಂದ ಹಾರಿತೀನ ವಂಶಜಹಿರಿತಿ–ಪಂಚಶಿಖ. ಇವನ ಚುಲುಕ (ಅಂಗೈ)ದಿಂದ ಚಾಲುಕ್ಯರು ಜನಿಸಿದರು. ಈ ಕಥೆಯ ಒಂದು ಪಾಠಾಂತರವು ಬಿಲ್ಹಣನ ವಿಕ್ರಮಾಂಕದೇವ ಚರಿತದಲ್ಲಿ ಸಿಕ್ಕುತ್ತದೆ. ಇಲ್ಲಿ ಚಾಲುಕ್ಯವಂಶದ ಮೂಲಪುರುಷನಿಂದ ನಾಯಕನು ಭೂಮಿಯಲ್ಲಿ ಉಂಟಾಗಿರುವ ಅನಾಯಕತ್ವವನ್ನು ಹೋಗಲಾಡಿಸಬೇಕೆಂದು ಇಂದ್ರನು ಕೋರಲಾಗಿ, ಬ್ರಹ್ಮನ ಚುಲುಕದಿಂದ ಹುಟ್ಟಿದನು. ಈ ಕಥೆಗಳು ಕೇವಲ ಕಥೆಗಳಾಗಿವೆ. ಅಷ್ಟೆ ಅವನ್ನು ಐತಿಹಾಸಿಕ ಅಂಶಗಳೆಂದು ಪರಿಗಣಿಸಲು ಸಾಧ್ಯವಿಲ್ಲ. ಇದಕ್ಕಿಂತ ಸ್ವಲ್ಪ ಬೇರೆಯಾದ ಕಥನಗಳು ವೆಂಗಿಯ ಚಾಲುಕ್ಯರ ಶಾಸನಗಳಲ್ಲೂ ಕಂಡುಬರುತ್ತವೆ.

ಕೆಲವು ಸಾಹಿತ್ಯಕ ಹಾಗೂ ಚೋಳರ ಕೆಲವು ಶಾಸನಗಳ ಆಧಾರದಿಂದ ಪಂಡಿತ ರಾಘವಯ್ಯಂಗಾರ್ ಅವರು ಚಾಲುಕ್ಯರನ್ನು ವೇಲಿ ಸಮುದಾಯಕ್ಕೆ ಸೇರಿದವರು ಎಂದು ವರ್ಗೀಕರಿಸುತ್ತಾರೆ. ಡಾ. ಬಿ.ಆರ್. ಗೋಪಾಲರು ಬಾದಾಮಿ ಚಾಲುಕ್ಯರ ಇತ್ತೀಚಿಗೆ ದೊರೆತ ಶಾಸನಗಳಲ್ಲಿ ಯುದ್ಧಮಲ್ಲ, ರಾಜಮಲ್ಲ ಮುಂತಾದ ಬಿರುದುಗಳಿದ್ದುದು ಕಂಡುಬಂದಿದೆ. ಇವು ಕಲ್ಯಾಣದ ಅರಸರ ಬಿರುದುಗಳನ್ನು ಹೋಲುತ್ತವೆ; ಇದಲ್ಲದೆ ವಾತಾಪಿಯ ಅರಸರು ಸತ್ಯಾಶ್ರಯ ಮುಂತಾದ ಬಿರುದುಗಳನ್ನು ಹೊಂದಿದ್ದು, ಈ ಹೆಸರಿನ ಒಬ್ಬ ಅರಸನೂ ಕಲ್ಯಾಣ ಶಾಖೆಯಲ್ಲಿ ಇದ್ದಾನೆ ಎಂದು ವಾದಿಸಿದ್ದಾರೆ. ಒಟ್ಟಿನಲ್ಲಿ ರನ್ನ ಮತ್ತು ಶಾಸನಗಳು ನೀಡುವ ಬಾದಾಮಿ ಮತ್ತು ಕಲ್ಯಾಣದ ಶಾಖೆಗಳ ನಡುವಣ ಸಂಬಂಧ ನಿಜವೆಂದು ಹೇಳಬಹುದು. ಬಹುಶಃ ಇಲ್ಲಿನ ವಿವರಗಳಲ್ಲಿ ದೋಷಗಳಿದ್ದರು ಅವುಗಳನ್ನು ತಾಳೆ ನೋಡುವ ಸಾಧನಗಳಿದ್ದರೂ, ಅವುಗಳನ್ನು ತಾಳೆ ನೋಡುವ ಸಾಧನಗಳೇನು ಬೇರೆ ಇಲ್ಲ. ಇದರಿಂದ ನಮಗೆ ತಿಳಿಯುವುದೇನೆಂದರೆ ಕಲ್ಯಾಣ ಚಾಲುಕ್ಯರು ಬಾದಾಮಿ ಚಾಲುಕ್ಯರ ವಂಶಸ್ಥರೆಂದು ತಿಳಿಯಬಹುದು. ರಾಷ್ಟ್ರಕೂಟರ ಪ್ರಭಾವ ಕ್ರಿ.ಶ.೧೦ನೇ ಶತಮಾನದ ಕೊನೆಗೆ ಕ್ಷೀಣಿಸುತ್ತಾ ಬಂದು ಇಮ್ಮಡಿ ಕರ್ಕನನ್ನು ಸೋಲಿಸಿ ಕ್ರಿ.ಶ. ೯೭೩ರಲ್ಲಿ ಇಮ್ಮಡಿ ತೈಲಪನು ಅಧಿಕಾರಕ್ಕೆ ಬಂದನು.

### ಇಮ್ಮಡಿ ತೈಲಪ (ಕ್ರಿ.ಶ. ೯೭೩–೯೯೭)

ಇಮ್ಮಡಿ ತೈಲಪ ಕಲ್ಯಾಣ ಚಾಲುಕ್ಯ ಮನೆತನದ ಪ್ರಥಮ ದೊರೆ. ಈತನು ಕಲಚೂರಿ ರಾಜಕುಮಾರಿಯಾದ ಬೊಂತಾದೇವಿಯ ಮಗನು. ಸುಮಾರು ೨೪ ವರ್ಷಗಳ ಸುದೀರ್ಘ ಆಳ್ವಿಕೆಯಿಂದ ದಕ್ಷಿಣ ಭಾರತದಲ್ಲಿ ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿ ರಾಜ್ಯಭಾರ

ಮಾಡಿದನು. ತೈಲಪನ ಪತ್ನಿ ರಟ್ಟರಾಜ ಭಾಮಹನ ಮಗಳಾದ ಜಾಕವ್ವೆ ಈತನ ಮಕ್ಕಳು ಸತ್ಯಾಶ್ರಯ ಮತ್ತು ದಶವರ್ಮ, ಈತನು ಮಹಶೂರನಾಗಿದ್ದು, ಸಾಮ್ರಾಜ್ಯ ವಿಸ್ತರಿಸಿ, ಅದರ ಉತ್ತರೋತ್ತರ ಅಭಿವೃದ್ಧಿಗಾಗಿ ಶ್ರಮಿಸಿದನು. ತೈಲಪನ ಅಧಿಕಾರಾವಧಿಯಲ್ಲಿ ಈ ನಾಡು ಸುಭಿಕ್ಷವಾಗಿತ್ತೆಂದು ಹೇಳಬಹುದು.

ನೀಲಕಂಠಶಾಸ್ತ್ರೀಯವರ ಮಾತುಗಳಲ್ಲಿ ತೈಲನು "ರಾಷ್ಟ್ರಕೂಟ ಸಾಮ್ರಜ್ಯ-ಅವರ ಗೆಳೆಯರು ಮತ್ತು ಅವರ ವೈರಿಗಳು ಎಲ್ಲಕ್ಕೂ ವಾರಸುದಾರನಾದನು."[3] ತೈಲನು ಮೊದಮೊದಲು ಮಳಖೇಡದಲ್ಲಿದ್ದುಕೊಂಡೇ ರಾಜ್ಯಭಾರ ನಡೆಸುತ್ತಿದ್ದ. ಆದರೆ ಅನಂತರದಲ್ಲಿ ಇವನ ವಂಶಜರಿಂದ ರಾಜಧಾನಿ ಮಳಖೇಡದಿಂದ ಕಲ್ಯಾಣಕ್ಕೆ ಸ್ಥಳಾಂತರಿಸಲ್ಪಟ್ಟಿತು.

ತೈಲಪನು ಅಧಿಕಾರಕ್ಕೆ ಬಂದ ಮೇಲೆ ತನ್ನ ಬಲವನ್ನು ಹೆಚ್ಚಿಸಿಕೊಳ್ಳಲು ರಾಷ್ಟ್ರಕೂಟರ ಹಲವಾರು ಸಾಮಂತರ ಮೇಲೆ ಯುದ್ಧವನ್ನು ಕೈಗೊಂಡನು. ಗಂಗ ಮಾರಸಿಂಹನ ಅಧಿಕಾರಿಯನ್ನು ಮತ್ತು ಗಂಗ ಶಾಖೆಯ ಸಾಮಂತನಾದ ಪಾಂಚಾಲದೇವನನ್ನು ಕ್ರಿ.ಶ. ೯೭೭ರಲ್ಲಿ ಸೋಲಿಸಿದನು. ನಂತರ ಕ್ರಿ.ಶ.೯೮೦ರಲ್ಲಿ ಚೋಳರ ರಾಜನಾದ ರಾಜರಾಜ ಚೋಳನನ್ನು ಸೋಲಿಸಿ ಆತನಿಂದ ವಶಪಡಿಸಿಕೊಂಡ ಪ್ರದೇಶಕ್ಕೆ ತನ್ನ ಮಗನಾದ ಸತ್ಯಾಶ್ರಯನನ್ನು ರಾಜ್ಯಪಾಲನನ್ನಾಗಿ ನೇಮಿಸಿದನು. ಅನಂತರ ತನ್ನ ದಂಡಯಾತ್ರೆಯನ್ನು ಉತ್ತರದ ಕಡೆಗೆ ಅಂದರೆ ಕೊಂಕಣದ ಸಿಲ್ಹಾರರನ್ನು ಸೋಲಿಸಿ ಅವರ ರಾಜ್ಯವನ್ನು ವಶಪಡಿಸಿಕೊಂಡನು. ಸೇವುಣ ರಾಜ ಇಮ್ಮಡಿ ಬಿಲ್ಲಮನು ತೈಲಪನಿಗೆ ತಲೆಬಾಗಿ ಅವನ ಅಧೀನನಾದನು. ಮಾಳವ, ಲಲಾಟ ರಾಜ್ಯಗಳ ಮೇಲೆ ಕೂಡಾ ಹೋರಾಟ ನಡೆಸಿದನು. ಪಾರಮಾರರ ದೊರೆಯಾದ ಮಂಜನು ತೈಲಪನ ಸಾಮ್ರಾಜ್ಯವನ್ನು ವಶಪಡಿಸಿಕೊಳ್ಳುವ ಹವಣಿಕೆಯಲ್ಲಿದ್ದು ಅನೇಕ ಸಾರಿ ದಾಳಿಯಿಟ್ಟನು. ಮಂಜನು ಹದಿನಾರು ಸಾರಿ ತೈಲಪನನ್ನು ಸೋಲಿಸಿದ್ದಾಗಿ ಮೇರುತುಂಗನ 'ಪ್ರಬಂಧ ಚಿಂತಾಮಣಿ'ಯಿಂದ ತಿಳಿದುಬರುತ್ತದೆ. ಕೊನೆಗೆ ಮಂಜನು ತೈಲಪನಿಂದ ಸೋತುಹೋದನು. ಈತನನ್ನು ಕಲ್ಯಾಣದಲ್ಲಿ ಬಂಧಿಸಲಾಯಿತು. ಮಂಜನು ಸೆರೆಯಿಂದ ಪಾರಾಗಲು ಕುಟಿಲ ತಂತ್ರಗಳನ್ನು ನಡೆಸಿದುದರಿಂದ ತೈಲಪನು ರಟ್ಟರ ರಾಜಕುಮಾರಿಯನ್ನು ಮದುವೆ ಮಾಡಿಕೊಳ್ಳುವವರ ಮೂಲಕ ರಟ್ಟರ ಸಂಬಂಧ ಬೆಳೆಸಿದನು. ಈ ಸಂಬಂಧ ತೈಲಪನ ಭದ್ರತೆಗೆ ಸುಗಮ ಮಾರ್ಗವಾಯಿತು. ಈ ರಾಜಮನೆತನದ ಶಾಸನಗಳು ಈ ಅರಸನನ್ನು "ಕುಂತಲದೊರೆ"ಗಳೆಂದು ಬಣ್ಣಿಸುತ್ತವೆ. ಕುಂತಲ ದೇಶದ ಕೆಲವು ಪ್ರಮುಖ ಹಾಗೂ ಸುಪ್ರಸಿದ್ಧ ವಿಭಾಗಗಳೆಂದರೆ, ಬನವಾಸಿ-೧೨.೦೦೦, ಪಾನುಂಗಲ್ಲು ೫೦೦, ಪುಲಿಗೆರೆ ೩೦೦, ಬೆಳವೊಲ-೩೦೦, ಕುಂಡಿ ೩೦೦೦, ವೇಣುಗ್ರಾಮ ಅಥವಾ ಬೆಳಗಾವಿ ೭೦, ತೊರೆಗಲೆ ೬೦೦೦, ಕೆಲವಾಡಿ (ಬಾದಾಮಿಯ ಹತ್ತಿರದ್ದು) ೩೦೦, ಕಿಸುಕಾಡು-೩೦ (ಪಟ್ಟದಕಲ್ಲಿನ ಹತ್ತಿರದ್ದು), ಬಾಗಡಿಗೆ ಅಥವಾ ಬಾಗಲಕೋಟೆ ೭೦, ತರ್ದವಾಡಿ

೧೦೦೦. ನಿಜದ ಸರಿಗತಿಯೊಂದರೆ, ಇಮ್ಮಡಿ ತೈಲನು ಚೋಳರ ಶಾಸನವೊಂದರಲ್ಲಿ ಉಕ್ತವಾಗಿರುವಂತೆ ರಟ್ಟಪಾಡಿ ಏಳೂವರೆ ಲಕ್ಷ ದೇಶವೆಂದು ಹೆಸರಾಗಿದ್ದ ರಾಷ್ಟ್ರಕೂಟ ಸಾಮ್ರಾಜ್ಯವೆಲ್ಲವನ್ನು ಕೈವಶಪಡಿಸಿ ಕೊಂಡಿದ್ದನು.[೪] ಈತನು ನಂತರ ಕ್ರಿ.ಶ.೯೯೭ ಕೊನೆಯ ಸುಮಾರಿಗೆ ಈತನ ಹಿರಿಯ ಮಗ ಸತ್ಯಾಶ್ರಯನು ಅಧಿಕಾರಕ್ಕೆ ಬಂದನು.

**ಸತ್ಯಾಶ್ರಯ (ಕ್ರಿ.ಶ.೯೯೭-೧೦೦೮)**

ಸತ್ಯಾಶ್ರಯನು ಕ್ರಿ.ಶ.೯೯೭ ರಲ್ಲಿ ಅಧಿಕಾರಕ್ಕೆ ಬಂದು ೧೦೦೮ ಅವರೆಗೆ ರಾಜ್ಯವಾಳಿದನು. ಈತನ ತಂದೆ ಆಳುತ್ತಿದ್ದ ಎಲ್ಲ ಪ್ರದೇಶಗಳು ಈತನ ವಶಕ್ಕೆ ಬಂದವು. ಇವನು ಸಹ ತಂದೆಯಂತೆ ರಾಜ್ಯವಿಸ್ತರಣಾ ನೀತಿಯನ್ನು ಮುಂದುವರಿಸಿದನು. ಈತನ ಆಳ್ವಿಕೆಯಲ್ಲಿ ಕಾಲದಲ್ಲಿ ಪಾರಮಾರರ ರಾಜನಾದ ಸಿಂಧುರಾಜನು ಹಿಂದೆ ಕೈಬಿಟ್ಟ ಹೋಗಿದ್ದ ರಾಜ್ಯಗಳನ್ನು ಸತ್ಯಾಶ್ರಯನಿಂದ ವಶಪಡಿಸಿಕೊಳ್ಳಲು ಪ್ರಯತ್ನಿಸಿ ಸೋಲನ್ನನುಭವಿಸಿದನು. ಸತ್ಯಾಶ್ರಯನು ಗಂಗವಾಡಿಗೆ ಮತ್ತು ನೊಳಂಬವಾಡಿಗಳಿಗೆ ನುಗ್ಗಿದ್ದ ಚೋಳರೊಂದಿಗೆ ಯುದ್ಧಮಾಡಬೇಕಾಯಿತು. ಈ ಸಂಧಿಗ್ಧತೆಯನ್ನರಿತ ಸತ್ಯಾಶ್ರಯನು ಒಂದನೇ ರಾಜರಾಜ ಚೋಳನ ಆಕ್ರಮಣವನ್ನು ಹಿಮ್ಮೆಟ್ಟಿಸಿದನು. ಆದರೆ ಈ ಆಕ್ರಮಣದಿಂದ ಅಪಾರ ಐಶ್ವರ್ಯವನ್ನ ಕೊಳ್ಳೆಹೊಡೆದು ತಂಜಾವೂರು ದೇವಾಲಯಕ್ಕೆ ದಾನ ನೀಡಿರುವುದಾಗಿ ಶಾಸನವೊಂದರಿಂದ ತಿಳಿದುಬರುತ್ತದೆ.[೫] ರಾಜರಾಜ ಚೋಳನ ನಡುವೆ ಹಾಗೂ ಸತ್ಯಾಶ್ರಯನ ನಡುವೆ ನಡೆದ ಯುದ್ಧದಲ್ಲಿ ಈತನ ತಮ್ಮನಾದ ದಶವರ್ಮನು ಹತನಾದನು. ತಂದೆಯಂತೆ ಚೋಳರ ಆಕ್ರಮಣವನ್ನು ತಡೆದು ಚಾಲುಕ್ಯ ಸಾಮ್ರಾಜ್ಯವನ್ನು ರಕ್ಷಿಸಿದನು. ಸತ್ಯಾಶ್ರಯನ ಆಸ್ಥಾನದಲ್ಲಿ ಕನ್ನಡದ ಶ್ರೇಷ್ಠ ಕವಿಗಳಲ್ಲೊಬ್ಬನಾದ ರನ್ನನು ಆಶ್ರಯ ಪಡೆದಿದ್ದನು.

ಸತ್ಯಾಶ್ರಯನು ವೆಂಗಿ ರಾಜ್ಯದ ಮೇಲೆ ದಾಳಿಮಾಡಿದಲ್ಲದೆ ಕ್ರಿ.ಶ.೧೦೦೬ರ ಸುಮಾರಿನಲ್ಲಿ ಧನ್ಯಕಟಕ ಮತ್ತು ಯಾಣಮಂಡಲ ದುರ್ಗಗಳಿಗೆ ಬೆಂಕಿಯಿಟ್ಟನು. ಚೋಳರು ಇದನ್ನು ಉಗ್ರವಾಗಿ ಪ್ರತಿಭಟಿಸಿದರು. ಯುವರಾಜ ರಾಜೇಂದ್ರನ ಕೈಕೆಳಗೆ ಒಂದು ಸೈನ್ಯವು ಸತ್ಯಾಶ್ರಯನ ರಾಜ್ಯದ ಮೇಲೆ ಆಕ್ರಮಣ ಮಾಡಿತು. ಹೊಟ್ಟೂರು ಶಾಸನದ ಮಾತುಗಳಲ್ಲಿ, ರಾಜರಾಜನ ನಿತ್ಯಾನಂದಕಾರಕನಾದ ರಾಜೇಂದ್ರ ವಿದ್ಯಾಧರನು ೯೦೦,೦೦೦ ಬಲಿಷ್ಠ ಯೋಧರನ್ನುಳ್ಳ ಸೈನ್ಯದೊಂದಿಗೆ ಗಡಿಯನ್ನು ದಾಟಿ ದೊಣವೂರಿನಲ್ಲಿ ಶಿಬಿರವನ್ನು ಹಾಕಿದನು. ಇಡೀ ರಾಜ್ಯವನ್ನು ಲೂಟಿ ಹೊಡೆದು, ಹೆಂಗಸರು ಮಕ್ಕಳನ್ನು ಬ್ರಾಹ್ಮಣರನ್ನು ಕಗ್ಗೊಲೆ ಮಾಡಿದನು. ಸ್ತ್ರೀಯರನ್ನು ಸೆರೆಹಿಡಿದು ಅವರ ಜಾತಿಯನ್ನು ಹಾಳುಮಾಡಿದನು.[೬] ಸತ್ಯಾಶ್ರಯನಿಗೆ ಇದನ್ನು ಎದುರಿಸಲು ಸಾಧ್ಯವಾಗಲಿಲ್ಲ. ಇದರಿಂದ ಸತ್ಯಾಶ್ರಯನು ತನ್ನ ರಾಜ್ಯದ ಗಣನೀಯ ಭಾಗವನ್ನು ಬನವಾಸಿ ಮತ್ತು ಮಾನ್ಯಖೇಟ ಮೊದಲಾದ ಹಲವು ನಗರಗಳನ್ನು ಕಳೆದುಕೊಂಡನು.

ನಂತರ ಸತ್ಯಾಶ್ರಯನು ಶಿಲಾಹಾರ ಅಪರಾಜಿತ ಮತ್ತು ಮೂಲರಾಜರೊಂದಿಗೆ ಯುದ್ಧವನ್ನು ಮಾಡಿ ಅಪರಾಜಿತನನ್ನು ಸೋಲಿಸಿ ದೇಶಭ್ರಷ್ಟನಾಗಿದ್ದ ಚಾಲುಕ್ಯ ಅಧೀನರಾಜ ಬಾರಪ್ಪನ ಮಗನಾದ ಗೊಪ್ಪೊ ರಾಜನನ್ನು ಲಾಟದ ರಾಜನನ್ನಾಗಿ ನೇಮಿಸಿದನು.

ಸತ್ಯಾಶ್ರಯನಿಗೆ ಗಂಡುಮಕ್ಕಳಿರಲಿಲ್ಲ. ಕೇವಲ ಒಬ್ಬ ಮಗಳಿದ್ದು ಅವಳನ್ನು ನೊಳಂಬ ಪಲ್ಲವರಾಜ ಇರವನೊಳಂಬಾಧಿ ರಾಜನಿಗೆ ಮದುವೆ ಮಾಡಿಕೊಟ್ಟನು.

## ಐದನೇ ವಿಕ್ರಮಾದಿತ್ಯ (೧೦೦೮-೧೦೧೫)

ಸತ್ಯಾಶ್ರಯನ ತರುವಾಯ ದಶವರ್ಮನ ಹಿರಿಯ ಮಗನಾದ ಐದನೇ ವಿಕ್ರಮಾದಿತ್ಯ ಪಟ್ಟಕ್ಕೆ ಬಂದ. ಇವನು ಅಷ್ಟೇನು ಪ್ರಭಾವಶಾಲಿಯಾಗಿರಲಿಲ್ಲವಾದ್ದರಿಂದ ದಕ್ಷಿಣದ ಚೋಳರು, ಉತ್ತರದ ಪಾರಮಾರ ಅರಸ ಭೋಜನು ಇವನ ರಾಜ್ಯವನ್ನು ಮುತ್ತಿದರು. ರಾಜ್ಯವನ್ನು ವೈರಿಗಳಿಂದ ರಕ್ಷಿಸಿಕೊಳ್ಳುವುದಕ್ಕಾಗಿ ತುಂಬಾ ಶ್ರಮಿಸಬೇಕಾಯಿತು. ಈತನ ಆಳ್ವಿಕೆಯ ಆರಂಭದ ವೇಳೆಗೆ ಚೋಳರು ಗಂಗಸಾಮ್ರಾಜ್ಯಕ್ಕೆ ಮುತ್ತಿಗೆ ಹಾಕಿ ಗಂಗ ಮನೆತನವನ್ನು ನಾಶಮಾಡಿದರಲ್ಲದೆ ಗಂಗವಾಡಿಯನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಇವನದು ಅಲ್ಪ ಅವಧಿಯ ಆಳ್ವಿಕೆ, ಅವನ ಕಾಲದ ಶಾಸನಗಳೂ ವಿರಳ. ಯಾವುದೇ ಮಹಾನ್ ಘಟನೆಯನ್ನು ಅವು ಉಲ್ಲೇಖಿಸುವುದಿಲ್ಲ. ಈತನು ನೊಳಂಬವಾಡಿ-೩೦,೦೦೦, ಕೆಂಗಲಿ-೫೦೦, ಬಳ್ಳಕುಂದೆ-೩೦೦, ಕುಕ್ಕನೂರು-೩೦ ಮತ್ತು ಮಾಸವಾಡಿ ದೇಶದ ಐದು ನಗರಗಳ ಅಧಿಪತಿಯಾಗಿದ್ದ ಕ್ರಿ.ಶ. ೧೦೦೯ರಿಂದ ೧೦೧೧ ರವರೆಗೆ ಇವನು ಆಳುತ್ತಿದ್ದನೆಂಬ ಬಗೆಗೆ ಶಾಸನಾಧಾರಗಳಿವೆ.[೭]

## ಅಯ್ಯಣ (ಕ್ರಿ.ಶ. ೧೦೧೫)

ಐದನೇ ವಿಕ್ರಮಾದಿತ್ಯನ ಸಹೋದರ ಅಯ್ಯಣ ಕೆಲವು ತಿಂಗಳ ಕಾಲ ಮಾತ್ರ ಆಳ್ವಿಕೆ ನಡೆಸಿದನು. ಇವನ ಬಗೆಗೆ ಯಾವುದೇ ಶಾಸನಗಳು ವಿಪುಲವಾಗಿ ಲಭ್ಯವಾಗಿಲ್ಲ. ಈತನ ಅವಧಿಯಲ್ಲಿ ಅಕ್ಕಾದೇವಿ ಅಯ್ಯಣನ ತರುವಾಯದಲ್ಲಿ ರಾಜ್ಯವಾಳುತ್ತಿದ್ದಳೆಂದು ಅನೇಕ ಶಾಸನಗಳು ಉಲ್ಲೇಖಿಸಿವೆ.

## ಎರಡನೇ ಜಯಸಿಂಹ (ಕ್ರಿ.ಶ. ೧೦೧೫ರಿಂದ ೧೦೪೪)

ಅಯ್ಯಣ ನಂತರ ಇಮ್ಮಡಿ ಜಯಸಿಂಹನು ಅಧಿಕಾರಕ್ಕೆ ಬಂದನು. ಇವನ ಆಳ್ವಿಕೆಯ ಕಾಲದಲ್ಲಿ ರಾಜೇಂದ್ರ ಚೋಳನೂ, ಪಾರಮಾರರ ಭೋಜನು, ಕಳಚೂರಿ ಗಾಂಗೇಯ ರಾಜನು ಒಂದುಗೂಡಿ ಏಕಕಾಲದಲ್ಲಿ ಚಾಲುಕ್ಯ ಸಾಮ್ರಾಜ್ಯವನ್ನು ಆಕ್ರಮಿಸಲು ಮುಂದಾದರು. ರಾಜೇಂದ್ರ ಚೋಳ ತುಂಗಭದ್ರ ನದಿಯನ್ನು ದಾಟಿ ಕೃಷ್ಣಾ ನದಿಯವರೆಗೆ ಆಕ್ರಮಣ ಕೈಗೊಂಡು ಜಯಸಿಂಹನನ್ನು ಸೋಲಿಸಿದನೆಂದು ತಿಳಿದುಬರುತ್ತದೆ. ಆದರೆ ಜಯಸಿಂಹನು ತನ್ನ ದಂಡನಾಯಕ

ಚಾವಣರಸನ ನೇತೃತ್ವದಲ್ಲಿ ರಾಜೇಂದ್ರ ಚೋಳನನ್ನು ಸೋಲಿಸಿ ಹಿಂದಕ್ಕಟ್ಟಿದ್ದನು. ಇದೇ ಸಂದರ್ಭದಲ್ಲಿ ಪಾರಮಾರರ ಭೋಜರಾಜನು ಕೊಂಕಣವನ್ನು ಮುತ್ತಿದನು. ಜಯಸಿಂಹನು ಕ್ರಿ.ಶ.೧೦೨೪ ರ ವೇಳೆಗೆ ಪಾರಮಾರರನ್ನು ಕೊಂಕಣದಿಂದ ಓಡಿಸಿ ಕೊಂಕಣವನ್ನು ಪುನಃ ತನ್ನ ಅಧೀನಪಡಿಸಿಕೊಂಡನು. ಕಾಳಿದಾಸನೆಂಬ ಮತ್ತೊಬ್ಬ ದಂಡನಾಯಕ ಕೊಲ್ಲಾಪುರದ ಸಿಲ್ಹಾರರನ್ನು ಸೋಲಿಸಿದನು. ಜಯಸಿಂಹನು ತನ್ನ ಸಾಮ್ರಾಜ್ಯದ ಎದುರಾಳಿಗಳನ್ನು ಜಯಿಸುವುದರಲ್ಲಿ ಯಶಸ್ವಿಯಾದನು.

ಜಯಸಿಂಹನು ೧೦೩೧ರಲ್ಲಿ ಚೋಳರೊಂದಿಗೆ ಮತ್ತೆ ಯುದ್ಧ ಮಾಡಬೇಕಾಯಿತು. ಈ ಸಾರಿ ವಿಜಯ ಅವನದಾಗಿತ್ತು. ಇವನ ಆಳ್ವಿಕೆಯ ಕಾಲವು ಶಾಂತಿಯಿಂದ ಕೂಡಿತ್ತು. ಇವನ ಮಂಡಳೇಶ್ವರರಲ್ಲಿ ಪ್ರಮುಖರಾದವರೆಂದರೆ ಗೊವೆಯ ಕದಂಬರು, ಬನವಾಸಿ ಅರಸ, ಸೇವುಣ ಮೂರನೆ ಭಿಲ್ಲಮ, ಮತ್ತು ಹಾನಗಲ್ಲ ಕದಂಬ ವಂಶದ ಮಯೂರವರ್ಮ ಇವನಿಗೆ ಸುಗ್ಗಲದೇವಿ, ದೇವಲದೇವಿ, ಮತ್ತು ಲಕ್ಷೀದೇವಿ ಎಂಬ ಮೂವರು ರಾಣಿಯರು, ಮಾನ್ಯಖೇಟವು ಆಳ್ವಿಕೆಯ ಕೊನೆಯವರೆಗೂ ರಾಜಧಾನಿಯಾಗಿತ್ತು.

ಯಾದಗಿರು ಮತ್ತು ಕೊಲ್ಲಿಪಾಕೆ (ಹಿಂದಿನ ನಿಜಾಂ ರಾಜ್ಯಕ್ಕೆ ಸೇರಿದ ಭಾಗ) ಹಾಗೂ ಹೊತ್ತಲಕೆರೆ (ಇಂದಿನ ಬಳ್ಳಾರಿ ಜಿಲ್ಲೆಯಲ್ಲಿದೆ) ಕಲ್ಯಾಣವನ್ನು 'ನೆಲವೀಡು' (ಖಾಯಂ ಸೇವಾ ಶಿಬಿರ) ಇವು ಉಪರಾಜಧಾನಿಗಳು ಎಂದು ಉಲ್ಲೇಖಿಸಲಾಗಿದೆ.

## ಒಂದನೇ ಸೋಮೇಶ್ವರ (ಕ್ರಿ.ಶ. ೧೦೪೪-೧೦೬೮)

ಇಮ್ಮಡಿ ಜಯಸಿಂಹನ ನಂತರ ಅವನ ಮಗ ಸೋಮೇಶ್ವರನು ಪಟ್ಟಕ್ಕೆ ಬಂದನು. ಬಿಲ್ಹಣನ ಪ್ರಕಾರ ಸೋಮೇಶ್ವರನು ಕಲ್ಯಾಣ ನಗರವನ್ನು ಎಷ್ಟರ ಮಟ್ಟಿಗೆ ಅಲಂಕರಿಸಿದನೆಂದರೆ "ಅಂತಹ ಇನ್ನೊಂದು ನಗರವು ಹಿಂದೆ ಎಂದೂ ಇರಲಿಲ್ಲ, ಮುಂದೆ ಎಂದೂ ಇರುವುದಿಲ್ಲ" 'ನೆಲವೀಡು' ಆಗಿದ್ದುದು ಸಾಮ್ರಾಜ್ಯದ ರಾಜಧಾನಿಯಾಯಿತು.[೮]

ಈತನ ಆಳ್ವಿಕೆಯ ಉದ್ದಕ್ಕೂ ಚೋಳ ಮತ್ತು ಚಾಲುಕ್ಯರ ನಡುವಿನ ಬದ್ಧ ದ್ವೇಷದಿಂದಾಗಿ ಸತತವಾಗಿ ಹೋರಾಟಗಳು ನಡೆದವು. ಸೋಮೇಶ್ವರನ ಸಮಕಾಲೀನ ರಾಜರಾಗಿದ್ದು ರಾಜೇಂದ್ರನ ತರುವಾಯ ಕ್ರಮವಾಗಿ ಆಳಿದ ರಾಜಾಧಿರಾಜ ಮತ್ತು ವೀರರಾಜೇಂದ್ರರು ನಿರಂತರ ಯುದ್ಧಗಳನ್ನು ನಡೆಸಿದರು. ಚಾಳುಕ್ಯ ಸಾಮ್ರಾಜ್ಯದ ಅನೇಕ ಪಟ್ಟಣಗಳಿಗೆ ಚೋಳ ರಾಜಾಧಿರಾಜನು ಕ್ರಿ.ಶ.೧೦೪೪ ರಲ್ಲಿ ತುಂಗಭದ್ರಾ ನದಿಯನ್ನು ದಾಟುವುದರ ಮೂಲಕ ಮುತ್ತಿಗೆಯನ್ನು ಹಾಕಿದನು. ಚೋಳರ ಸೈನ್ಯಗಳು ಪದೇ ಪದೇ ಚಾಳಕ್ಯ ಸಾಮ್ರಾಜ್ಯಕ್ಕೆ ದಾಳಿಯಿಡುತ್ತಿದ್ದವು. ಕ್ರಿ.ಶ.೧೦೫೧ ರಾಜಾಧಿರಾಜನು ಕೊಲ್ಲಾಪುರದವರೆಗೂ ಮುಂದುವರಿದು ಅಲ್ಲಿನ ಜೈನ ಬಸದಿಗಳನ್ನು ದ್ವಂಸ ಮಾಡಿದನು.

ಚೋಳರ ದಂಡಯಾತ್ರೆಯನ್ನು ತಡೆಗಟ್ಟುವುದಕ್ಕೊಸ್ಕರ ಸೋಮೇಶ್ವರನು ಸುರಕ್ಷಿತ ಹಾಗೂ ಪ್ರಬಲವಾದ ಸೈನ್ಯವೊಂದನ್ನು ನಿರ್ಮಿಸಿದನು. ಅನಂತರ ಕ್ರಿ.ಶ. ೧೦೫೪ರಲ್ಲಿ ಚೋಳ ಮತ್ತು ಚಾಲುಕ್ಯರ ನಡುವೆ ಕೊಪ್ಪಂ ಬಳಿಯಲ್ಲಿ ಭಯಂಕರ ನಿರ್ಣಾಯಕವಾದ ಯುದ್ಧ ಜರುಗಿತು. ಈ ಕೊಪ್ಪಂ ಎಂಬುದು ಕೊಪ್ಪಳವೇ ಆಗಿರಬೇಕೆಂದು ವಿದ್ವಾಂಸರು ಊಹಿಸಿದ್ದಾರೆ. ಚೋಳ ಸಾಮ್ರಾಟನಾದ ರಾಜಾಧಿರಾಜನು ಚಾಲುಕ್ಯರ ಹೊಡೆತಕ್ಕೆ ಸಿಕ್ಕು ಯುದ್ಧ ಭೂಮಿಯಲ್ಲಿ ಅಸುನೀಗಿದನು. ಈತನು ಅಸುನೀಗಿದ್ದರಿಂದ ಇವನ ಸೈನ್ಯವು ತತ್ತರಿಸಿ ದಿಕ್ಕಾಪಾಲಾಯಿತು. ರಣರಂಗದಲ್ಲಿ ಸೈನ್ಯದ ನಾಯಕತ್ವವನ್ನು ವಹಿಸಿದ ಇಮ್ಮಡಿ ರಾಜೇಂದ್ರನು ಯುದ್ಧವನ್ನು ಪುನಃ ಮುಂದುವರಿಸಿದನು. ಯುದ್ಧವು ಭಯಂಕರ ರೂಪವನ್ನು ತಾಳಿ ಎರಡು ಸೈನ್ಯದಲ್ಲಿ ಅಪಾರ ಸಾವು–ನೋವುಗಳಾದವು. ಸೋಮೇಶ್ವರನು ಸಹೋದರನಾದ ಜಯಸಿಂಹನು ಸಾವಿಗೀಡಾದನು. ಚೋಳ ಸೈನ್ಯವು ಅಂತಿಮವಾಗಿ ಸೋಲನ್ನು ಅನುಭವಿಸಿತು. ಆದರೆ ಈ ಯುದ್ಧದ ಬಗ್ಗೆ ಚೋಳ ಶಾಸನದಲ್ಲಿ ಕಂಡುಬರುವ ಈ ವಿವರಣೆ ಉತ್ಪ್ರೇಕ್ಷೆಯಿಂದ ಕೂಡಿದೆ. ಈ ಯುದ್ಧದ ಫಲಿತಾಂಶ ಕೂಡ ವಿದ್ವಾಂಸರಲ್ಲಿ ಚರ್ಚೆಯ ವಸ್ತುವಾಗಿದೆ. ಬಹುಶಃ ಫಲಿತಾಂಶ ನಿರ್ಣಾಯಕವಾಗಲಿಲ್ಲವೆಂದು ತೋರುತ್ತದೆ. ರಣರಂಗದಿಂದ ಹಿಂದಿರುಗುವ ಮಾರ್ಗದಲ್ಲಿ ರಾಜೇಂದ್ರನು ಬಳ್ಳಾರಿ ಜಿಲ್ಲೆಯ ಕಮ್ಮಟದುರ್ಗಕ್ಕೆ ಮುತ್ತಿಗೆ ಹಾಕಿದನು. ಸೋಮೇಶ್ವರನು ಅವನನ್ನು ಅಟ್ಟಿಸಿಕೊಂಡು ಹೋಗಿ ಚಾಲುಕ್ಯಗಡಿಯಿಂದಾಚಾಗೆ ಓಡಿಸಿದನು. ಧಾರವಾಡ ಜಿಲ್ಲೆಯ ಔಲಿಹಳ್ಳಿಯಲ್ಲಿ ಚೋಳರಿಗೂ ಮತ್ತು ಚಾಲುಕ್ಯರಿಗೂ ಮತ್ತೆ ಕದನವೇರ್ಪಟ್ಟಿತು. ಈ ಕದನದಲ್ಲಿ ಚೋಳ ಸೈನ್ಯವು ಸೋತಿತು. ಕೊನೆಯದಾಗಿ ೧೦೬೪ರಲ್ಲಿ ಚಾಲುಕ್ಯರಿಗೆದುರಾಗಿ ವೀರರಾಜೇಂದ್ರನು ದಂಡೆತ್ತಿ ಬಂದನು. ಕೂಡಲಸಂಗಮದಲ್ಲಿ ಘರ್ಷಿಸಿದರು. ಈ ಬಾರಿಯು ಯುದ್ಧದ ಫಲಿತಾಂಶವು ನಿರ್ಣಾಯಕವಾಗಲಿಲ್ಲ.

ಕ್ರಿ.ಶ. ೧೦೬೧ರಲ್ಲಿ ವೆಂಗಿಯ ರಾಜರಾಜನು ಗತಿಸಿದನು. ವೆಂಗಿ ಮಂಡಲ ಚಾಲುಕ್ಯ ಚೋಳರ ಬಲಾಬಲ ಪರೀಕ್ಷೆಯ ಕಣವಾಯಿತು. ಚಾಲುಕ್ಯ ಸೈನ್ಯಗಳು ರಾಜರಾಜನ ಮಗ ನರೇಂದ್ರನನ್ನು ಸೋಲಿಸಿದವು. ನರೇಂದ್ರನು ಚೋಳರ ಮರೆಹೊಕ್ಕನು. ವೆಂಗಿ ಮಂಡಲದ ಭಾಗಗಳು ಚಾಲುಕ್ಯರ ವಶವಾದವು. ಸೋಮೇಶ್ವರನ ಆಳ್ವಿಕೆಯುದ್ಧಕ್ಕೂ ನಿರಂತರ ಯುದ್ಧಗಳಲ್ಲೆ ಕಾಲಕಳೆದನು. ಶತ್ರುಗಳ ದ್ವೇಷದಿಂದಾಗಿ ಸಾಮ್ರಾಜ್ಯವನ್ನು ಸುರಕ್ಷಿತವಾಗಿಡಲು ಯಶಸ್ವಿಯಾಗಿ ಹೋರಾಟ ನಡೆಸಬೇಕಾಯಿತು. ತನ್ನ ಕೊನೆಯ ಅವಧಿಯುದ್ಧಕ್ಕೂ ಯುದ್ಧದ ಸುರಿಮಳೆಯಲ್ಲಿ ಕಾಲಕಳೆದನು. ಈತನಿಗೆ ಬಾಚಲದೇವಿ, ಚಂದಲಬೆಟ್ಟೆ, ಮೈಲಳದೇವಿ, ಲೀಲಾದೇವಿ, ಹೊಯ್ಸಲದೇವಿ, ಮೊದಲಾದ ಎಂಟು ಮಂದಿ ರಾಣಿಯರೂ, ನಾಲ್ವರು ಗಂಡು ಮಕ್ಕಳು ವಿಷ್ಣುವರ್ದನ, ವಿಜಯಾದಿತ್ಯ ಮೊದಲಾದವರು ಇದ್ದರು. ಹಿರಿಯರಾಣಿ ಬಾಚಲದೇವಿಯಲ್ಲಿ

ಮೂವರು ಗಂಡುಮಕ್ಕಳು. ಈ ಮೂವರು ಆಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು.

ಬಿಲ್ಹಣನ ಪ್ರಕಾರ ಸೋಮೇಶ್ವರನಿಗೆ ಉಗ್ರವಾದ ರೋಗವೊಂದು ಬಂದುದರಿಂದ ೧೦೬೮ರಲ್ಲಿ ತುಂಗಭದ್ರಾ ನದಿಯಲ್ಲಿ ಮುಳುಗಿ ಸಾವನ್ನಪ್ಪದನೆಂದು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ಶಾಸನದಿಂದ ತಿಳಿದುಬರುತ್ತದೆ.

**ಎರಡನೆ ಸೋಮೇಶ್ವರ (ಕ್ರಿ.ಶ. ೧೦೬೮-೧೦೭೬)**

ಒಂದನೆಯ ಸೋಮೇಶ್ವರನ ಹಿರಿಯ ಮಗನಾದ ಎರಡನೆಯ ಸೋಮೇಶ್ವರನು ಕ್ರಿ.ಶ.೧೦೬೮ ರಲ್ಲಿ ಅಧಿಕಾರಕ್ಕೆ ಬಂದನು. ಈತನು ಆಳ್ವಿಕೆಯ ಆರಂಭದಲ್ಲಿ ಇವನ ಸಹೋದರ ವಿಕ್ರಮಾದಿತ್ಯನು ಇವನ ವಿರುದ್ಧ ಬಂಡೆದ್ದನು. ವಿಕ್ರಮಾದಿತ್ಯನು ವೀರರಾಜೇಂದ್ರ ಚೋಳನ ಅಳಿಯನಾಗಿದ್ದರಿಂದ ವೀರರಾಜೇಂದ್ರನ ಸಂಪೂರ್ಣ ಸಹಕಾರ ವಿಕ್ರಮಾದಿತ್ಯನಿಗಿತ್ತು. ಯುದ್ಧ ಕುಶಲ ನೀತಿಯುಳ್ಳ ಸೋಮೇಶ್ವರನು ಚೋಳರ ಮತ್ತು ವಿಕ್ರಮಾದಿತ್ಯನ ಸೈನ್ಯವನ್ನು ಹತ್ತಿಕ್ಕಿ ವಿಜಯಶಾಲಿಯಾದನು. ಅನಂತರ ಅಣ್ಣ ತಮ್ಮಂದಿರೀರ್ವರಲ್ಲಿ ಸೋದರ ಭಾವನೆಯುಂಟಾಗಿ ಹಲವು ವರ್ಷಗಳ ಕಾಲ ವಿಕ್ರಮಾದಿತ್ಯನು ಇಮ್ಮಡಿ ಸೋಮೇಶ್ವರನಿಗೆ ಆಡಳಿತ ನಡೆಸಲು ನೆರವಾದನು. ಈತ ಸಿಂಹಾಸನಕ್ಕೆ ಬಂದೊಡನೆಯೇ ಚಾಲುಕ್ಯ ರಾಜ್ಯದ ಪರಿಸ್ಥಿತಿಯ ಪ್ರಯೋಜನ ಪಡೆಯಲೆತ್ನಿಸಿದ ಚೋಳರನ್ನು ಎದುರಿಸಬೇಕಾಯಿತು. ಚಾಲುಕ್ಯ ಸೈನ್ಯವನ್ನು ಎದುರಿಸಲಾರದೇ ಚೋಳರು ತಾವು ಆಕ್ರಮಿಸಿಕೊಂಡಿದ್ದ ಸ್ಥಳದಿಂದ ಪಲಾಯನ ಮಾಡಿದರು.

ನಂತರ ಸೋಮೇಶ್ವರನು ದಕ್ಷಿಣದ ಗಡಿಗಳನ್ನು ಬಲಪಡಿಸಿದನು. ಅದರ ಬೇರೆ ಬೇರೆ ಭಾಗಗಳನ್ನು ದಳಪತಿಗಳ ಉಸ್ತುವಾರಿಯಲ್ಲಿಟ್ಟನು. ಇವರಲ್ಲಿ ಮುಖ್ಯರಾದವರೆಂದರೆ ಆರನೇ ವಿಕ್ರಮಾದಿತ್ಯ, ನಾಲ್ಕನೇ ಜಯಸಿಂಹ, ಮತ್ತು ಲಕ್ಷ್ಮಣ ದಂಡನಾಯಕ. ಈ ಮೂವರು ಕ್ರಮವಾಗಿ ಗಂಗವಾಡಿ, ನೊಳಂಬವಾಡಿ-ಸಿಂದವಾಡಿ ಹಾಗೂ ಬನವಾಸಿಗಳ ಜವಾಬ್ದಾರಿಯನ್ನು ನಿರ್ವಹಿಸಿಕೊಂಡಿದ್ದರು.

ಸಹೋದರನ ಸಹಕಾರವನ್ನು ಹೊಂದಿದ ಇಮ್ಮಡಿ ಸೋಮೇಶ್ವರನು ಪರಮಾರರ ಮೇಲೆ ದಂಡಯಾತ್ರೆ ಕೈಗೊಂಡು ಭೋಜನ ಉತ್ತರಾಧಿಕಾರಿಯಾದ ಜಯಸಿಂಹನನ್ನು ಸೋಲಿಸಿದನು. ಈ ಸಮಯದಲ್ಲಿ ವಿಕ್ರಮಾದಿತ್ಯನ ಮಾವನಾದ ಚೋಳರಸ ವೀರರಾಜೇಂದ್ರನು ಮರಣಹೊಂದಿದನು. ಚೋಳ ಸಿಂಹಾಸನದ ಉತ್ತರಾಧಿಕಾರಕ್ಕೆ ಹೋರಾಟ ಪ್ರಾರಂಭವಾಯಿತು. ಈ ಸುಸಂದರ್ಭದಲ್ಲಿ ವಿಕ್ರಮಾದಿತ್ಯನು ಚೋಳ ಸಾಮ್ರಾಜ್ಯವನ್ನು ಮುತ್ತಿ ತನ್ನ ಭಾವಮೈದುನನಾದ ಆದಿರಾಜನನ್ನು ಚೋಳ ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಆದಿರಾಜನ ಆಳ್ವಿಕೆ ಅಲ್ಪ ಕಾಲದಲ್ಲಿ ಮುಕ್ತಾಯಗೊಂಡು ಒಂದನೆ ಕುಲೋತ್ತುಂಗನು ಚೋಳ ಸಾಮ್ರಾಟನಾದನು.

ವಾಸ್ತವವಾಗಿ ಕಲ್ಯಾಣ ಚಾಲುಕ್ಯ ಶಾಸನಗಳು (ಅನಂತಪುರ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿರುವವು) ವಿಕ್ರಮಾದಿತ್ಯನಿಗೆ ಪೂರ್ಣ ಚಕ್ರವರ್ತಿ ಬಿರುದುಗಳನ್ನು ಕೊಡುತ್ತವೆ. ಇವುಗಳ ಆಧಾರದಿಂದ ನೀಲಕಂಠಶಾಸ್ತ್ರಿಗಳು, ಆರನೇ ವಿಕ್ರಮಾದಿತ್ಯನು ಅಧಿಕಾರವನ್ನು ಬಲಾತ್ಕಾರವಾಗಿ ಕಿತ್ತುಕೊಂಡನೆಂದೂ, ಸಹೋದರರ ನಡುವೆ ಸಂಧಾನವಾಗಿ ಸಾಮ್ರಾಜ್ಯವು ವಿಭಜನೆಯಾಯಿತೆಂದು ಚೋಳಸಾಮ್ರಾಜ್ಯಕ್ಕೆ ಒತ್ತಿಕೊಂಡಿದ್ದ ಭಾಗಗಳು ವಿಕ್ರಮಾದಿತ್ಯನಿಗೆ ದೊರಕಿದುವೆಂದೂ ವಿಕ್ರಮಾದಿತ್ಯನು ಚೋಳ ವೀರರಾಜೇಂದ್ರನ ಮಗಳನ್ನು ಮದುವೆ ಮಾಡಿಕೊಂಡು ಮೈತ್ರಿ ಬೆಳಸಿದನೆಂದೂ ಪಟ್ಟುಹಿಡಿದು ವಾದಿಸುತ್ತಾರೆ.[೯]

ಎರಡನೇ ಸೋಮೇಶ್ವರನು ದುರದೃಷ್ಟಶಾಲಿಯಾದ ರಾಜನೆನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಅವನ ಕ್ರೌರ್ಯ ಮತ್ತು ನಿರಂಕುಶಾಧಿಕಾರಗಳನ್ನು ಕುರಿತು ಬಿಲ್ಹಣನ ಮಾತುಗಳನ್ನಾಗಲಿ ವಿಕ್ರಮಾದಿತ್ಯನ ಶಾಸನಗಳನ್ನಾಗಲಿ ನಂಬಲು ಕಾರಣವಿಲ್ಲ. ಒಟ್ಟಿನಲ್ಲಿ ಈತನ ಆಳ್ವಿಕೆ ಕ್ರಿ.ಶ.೧೦೭೬ ವೇಳೆಗೆ ಕೊನೆಗೊಂಡು ವಿಕ್ರಮಾದಿತ್ಯನು ಚಕ್ರವರ್ತಿಯಾದನು.

### ಆರನೆಯ ವಿಕ್ರಮಾದಿತ್ಯ (ಕ್ರಿ.ಶ. ೧೦೭೬-೧೧೨೬)

ಕಲ್ಯಾಣ ಚಾಲುಕ್ಯರಲ್ಲಿಯೇ ಅತ್ಯಂತ ಸುಪ್ರಸಿದ್ಧನಾದ ಸಾಮ್ರಾಟನಾಗಿದ್ದು, ಎರಡನೇ ಸೋಮೇಶ್ವರನು ನಂತರ ಕ್ರಿ.ಶ. ೧೦೭೬ರಲ್ಲಿ ಅಧಿಕಾರಕ್ಕೆ ಬಂದನು. ಈತನ ಆಳ್ವಿಕೆಯ ಆರಂಭದಿಂದ ಚಾಳುಕ್ಯ ವಿಕ್ರಮಶಕೆ ಆಚರಣೆಗೆ ಬಂದಿತು. ಈತನದು ೫೧ ವರ್ಷಗಳ ಸುಧೀರ್ಘ ಆಳ್ವಿಕೆ ಇವನ ಕಾಲದಲ್ಲಿ ದಂಡಯಾತ್ರೆಗಳ ಸುರಿಮಳೆಯೇ ಹರಿದಿದೆ. ವಿಜ್ಞಾನೇಶ್ವರನು ತನ್ನ 'ಮಿತಾಕ್ಷರ ಸಂಹಿತೆ'ಯಲ್ಲಿ ಈತನನ್ನು ಹೊಗಳಿದ್ದಾನೆ.

ನಾಸೀದಸ್ತಿಭವಿಷ್ಯತಿ ಕ್ಷಿತಿತಲೇಕಲ್ಯಾಣಕಲ್ಪಂಪುರಂ|

ನೋದ್ರಷ್ಟಃ ಶುತ್ರಏವವಾಕ್ಷಿತಿಪತಿಃ ಶ್ರೀ ವಿಕ್ರಮಾರ್ಕೇಪಮಃ||

ಭೂಮಿಯ ಮೇಲೆ ಕಲ್ಯಾಣದಂಥ ಮತ್ತೊಂದು ನಗರ ಈ ಹಿಂದೆ ಇರಲಿಲ್ಲ. ಇಂದೂ ಇಲ್ಲ, ಮುಂದೆಯೂ ಹುಟ್ಟುವುದಿಲ್ಲ. ವಿಕ್ರಮಾದಿತ್ಯನಂಥ ಚಕ್ರವರ್ತಿ ಪ್ರಪಂಚದಲ್ಲಿ ಬೇರೆ ಯಾರೂ ಇಲ್ಲ ಎಂದು ವಿಜ್ಞಾನೇಶ್ವರನು[೧೦] 'ಮಿತಾಕ್ಷರ' ಹೆಸರಿನ ಧರ್ಮಶಾಸ್ತ್ರ ಗ್ರಂಥದಲ್ಲಿ ಹೇಳಿದ್ದಾನೆ. ಈತನ ಆಳ್ವಿಕೆಯಲ್ಲಿ ಚಾಲುಕ್ಯ ಸಾಮ್ರಾಜ್ಯವೂ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಸುಭಿಕ್ಷೆಯಿಂದ ಕೂಡಿತ್ತು. ಇವನ ದಕ್ಷ ರಾಜ್ಯಭಾರವು ಅಪ್ರತಿಮ ಯುದ್ಧ ಕೌಶಲವು ಕರ್ನಾಟಕದ ಜನತೆಗೆ ಸದಾ ಸ್ಫೂರ್ತಿದಾಯಕವಾಗಿದೆ. ಅನೇಕ ಯುದ್ಧಗಳಲ್ಲಿ ಪಾಲ್ಗೊಂಡ ನುರಿತ ಯೋಧನೆನಿಸಿದ್ದು ಚಾಳುಕ್ಯ ಮನೆತನ ಹಾಗೂ ಕರ್ನಾಟಕದ ಕೀರ್ತಿ ವಿಶೇಷವಾಗಿ ವ್ಯಾಪಿಸಿತು. ವಿಕ್ರಮಾದಿತ್ಯನ ಆಡಳಿತ ಸುಭದ್ರತೆಯಿಂದ ಕೂಡಿತ್ತು.

ಆರನೆಯ ವಿಕ್ರಮಾದಿತ್ಯನು ಅನೇಕ ದಂಡಯಾತ್ರೆಗಳನ್ನು ಕೈಗೊಂಡನು. ಜಯಸಿಂಹನ ಬಂಡಾಯ ಕಾಲದಲ್ಲಿ ಅವನ ಪಕ್ಷವಹಿಸಿದ್ದ ಸಿಲ್ಹಾರ ಭೋಜನನ್ನೂ, ಆಳುಪರ ನಾಗವರ್ಮವನ್ನು ವಿಕ್ರಮಾದಿತ್ಯನು ಸೋಲಿಸಿ ದಂಡಿಸಿದನು. ಕ್ರಿ.ಶ. ೧೦೮೫ರಲ್ಲಿ ಚೋಳರ ರಾಜ್ಯಕ್ಕೆ ಮುತ್ತಿಗೆ ಹಾಗಿ ಕಂಚಿಯನ್ನು ವಶಪಡಿಸಿಕೊಂಡನು. ಆನಂತರ ತನ್ನ ದಿಗ್ವಿಜಯವನ್ನು ಮುಂದುವರಿಸಿ ವೆಂಗಿ ಪ್ರಾಂತವನ್ನು ಮುತ್ತಿ ಅದರ ಬಹುಭಾಗಗಳನ್ನು ತಮ್ಮ ಅಧೀನಪಡಿಸಿಕೊಂಡನು. ವಿಕ್ರಮಾದಿತ್ಯನ ಆಳ್ವಿಕೆಯ ಆರಂಭದಿಂದಲೂ ದೋರಸಮುದ್ರದ ಹೊಯ್ಸಳರು ಆತನಿಗೆ ವಿಧೇಯರಾಗಿದ್ದರು. ಇಮ್ಮಡಿ ವಿನಯಾದಿತ್ಯನ ಮಗ ಎರೆಯಂಗನು ವಿಕ್ರಮಾದಿತ್ಯನ ಪರವಾಗಿ ಚಾಳುಕ್ಯ ಸೈನ್ಯದ ನೇತೃತ್ವವನ್ನು ವಹಿಸಿ, ಮಾಳವ, ಧಾರ, ಚಕ್ರಕೂಟ ಮೊದಲಾದ ರಾಜ್ಯಗಳನ್ನು ಸೋಲಿಸಿದನು. ಅನಂತರ ಆಳ್ವಿಕೆಗೆ ಬಂದ ಹೊಯ್ಸಳ ವಿಷ್ಣುವರ್ಧನನು ಚಾಳುಕ್ಯರ ಹಿಡಿತದಿಂದ ಪಾರಾಗಲು ಚಾಳುಕ್ಯರ ಅನೇಕ ಸಾಮಂತರನ್ನು ಸೋಲಿಸಿದನು. ಇದರಿಂದ ಭೀತಿಗೊಂಡು ವಿಕ್ರಮಾದಿತ್ಯನು ವಿಷ್ಣುವರ್ಧನನನ್ನು ಎದುರಿಸಲು ಅವನ ವಿರುದ್ಧ ದೊಡ್ಡ ಸೈನ್ಯವೊಂದನ್ನು ಕಳುಹಿಸಿದನು. ಈ ಸೈನ್ಯ ವಿಷ್ಣವರ್ಧನನ ಸೈನ್ಯವನ್ನು ಹಾಸನ ಜಿಲ್ಲೆಯ ಕಣ್ಣೇಗಾಲ ಎಂಬಲ್ಲಿ ಸಂಧಿಸಿತು. ಕ್ರಿ.ಶ.೧೧೧೮ರಲ್ಲಿ ಚಾಳುಕ್ಯ ಮತ್ತು ಹೊಯ್ಸಳರ ನಡುವೆ ಘೋರ ಯುದ್ಧ ನಡೆದು ಚಾಳುಕ್ಯ ಸೈನ್ಯ ಸೋಲನ್ನಭುವಿಸಿ ಹಿಂತಿರುಗಿತು. ವಿಕ್ರಮಾದಿತ್ಯನು ಉತ್ತರದಲ್ಲಿ ಗೂರ್ಜರ ಮತ್ತು ಪಾರಮಾರರನ್ನು ಸೋಲಿಸಿದನು. ವಿಕ್ರಮಾದಿತ್ಯನ ಸಾಮ್ರಾಜ್ಯ ನರ್ಮದಾ ನದಿಯವರೆಗೂ ವಿಸ್ತರಿಸಿತ್ತು. ಗೋವೆ ಮತ್ತು ಹಾನಗಲ್ಲಿನ ಕದಂಬರು, ಉಚ್ಚಂಗಿಯ ಪಾಂಡ್ಯರು, ಯಲಬುರ್ಗಾದ ಸಿಂಧರೂ, ಸೇವುಣರು, ಪೆಂಬುರ್ಚದ ಶಾಂತಾರರು ಹಾಗೂ ತೆಲಂಗಾಣದ ಕಾಕತೀಯರು ಆರನೇ ವಿಕ್ರಮಾದಿತ್ಯನ ಸಾಮಂತರಾಗಿ ಉಳಿದುಕೊಂಡರು. ಈತನು ತನ್ನ ಆಸ್ಥಾನದಲ್ಲಿ ಅನೇಕ ವಿದ್ವಾಂಸರಿಗೆ ಅಶ್ರಯ ನೀಡಿದ್ದನು. ಒಟ್ಟಾರೆಯಾಗಿ ಕಲ್ಯಾಣ ಚಾಲುಕ್ಯರಲ್ಲಿಯೇ ಮಹಾನ್ ವೀರಯೋಧ, ದಕ್ಷ ಆಡಳಿತಗಾರ, ಮಹಾವಿಜೇತನೂ, ಸಾಹಿತ್ಯ, ವಿದ್ಯೆ ಹಾಗೂ ಕಲಾಪೋಷಕನು ಆಗಿದ್ದನು. ಈತನ ಆಳ್ವಿಕೆಯಲ್ಲಿ ಶಾಂತಿ ಸುಭಿಕ್ಷತೆ ನೆಲೆಸಿತ್ತು. ಕ್ರಿ.ಶ.೧೧೨೭ರಲ್ಲಿ ವಿಕ್ರಮಾದಿತ್ಯನು ಮರಣ ಹೊಂದಿದನು.

### ಮೂರನೇ ಸೋಮೇಶ್ವರ (ಕ್ರಿ.ಶ.೧೧೨೭-೧೧೩೯)

ವಿಕ್ರಮಾದಿತ್ಯನ ಮರಣದ ನಂತರ ಆತನ ಮಗನಾದ ಮೂರನೇ ಸೋಮೇಶ್ವರನು ಕ್ರಿ.ಶ. ೧೧೨೭ರಲ್ಲಿ ಅಧಿಕಾರಕ್ಕೆ ಬಂದನು. ಮೂರನೇ ಸೋಮೇಶ್ವರನ ಆಳ್ವಿಕೆ ಕಾಲದಲ್ಲಿ ವೆಂಗಿ ರಾಜ್ಯದ ಸಮಸ್ಯೆ ಉದ್ಭವಿಸಿ ಚೋಳ ಮತ್ತು ಚಾಳುಕ್ಯರ ನಡುವೆ ಕದನಗಳೇರ್ಪಟ್ಟವು. ಆದರೆ ಯಾವ ಫಲವನ್ನು ಕೊಡಲಿಲ್ಲ. ನಂತರ ಉಚ್ಛಂಗಿಯ ಪಾಂಡ್ಯರು, ಹಾನಗಲ್ಲು ಕದಂಬರು ಮತ್ತು ಹೊಯ್ಸಳ ವಿಷ್ಣುವರ್ಧನ ಈ ಸಾಮಂತರ ಮೇಲೆ ಏರಿ ಹೋದನು. ಅವರು ಈ

ಅವಧಿಯಲ್ಲಿ ಶಾಂತವಾಗಿದ್ದರು. ಇದರಿಂದ ಶಾಂತಿ ಕಲೆಗಳ ಕಡೆಗೆ ರಾಜನು ಹೆಚ್ಚು ಗಮನಕೊಡಲು ಅವಕಾಶವಾಯಿತು. ಆದ್ದರಿಂದ ಸೋಮೇಶ್ವರನ ಒಲವು ಸಾಹಿತ್ಯ ಕಲೆಗಳತ್ತ ತಿರುಗಲು ಅನುಕೂಲವಾಯಿತು. ಮೂರನೆ ಸೋಮೇಶ್ವರನು ಸ್ವತಃ ಕವಿಯಾಗಿದ್ದು 'ಮಾನಸೋಲ್ಲಾಸ' ಎಂಬ ಗ್ರಂಥವನ್ನು ಬರೆದನು. 'ಮಾನಸೋಲ್ಲಾಸವು' ನ್ಯಾಯಶಾಸ್ತ್ರ, ವೈದ್ಯಶಾಸ್ತ್ರ, ಸಂಗೀತ, ಚಿತ್ರಕಲೆ, ಗಜಶಾಸ್ತ್ರ, ಅಶ್ವಶಾಸ್ತ್ರ, ಅಲಂಕಾರ ಮೊದಲಾದ ಅನೇಕ ವಿಷಯಗಳ ನಿರೂಪಣೆಯನ್ನು ಕುರಿತು ಉದ್ಗ್ರಂಥವಾಗಿದೆ. ಜೊತೆಗೆ ಅವನು 'ವಿಕ್ರಮಾಂಕಾಭ್ಯುದಯ' ಎಂಬ ಕಾವ್ಯವನ್ನು ರಚಿಸಿದನು. ಇವನ ನಂತರ ಹಿರಿಯ ಮಗನಾದ ಎರಡನೆಯ ಜಗದೇಕಮಲ್ಲನು ಅಧಿಕಾರಕ್ಕೆ ಬಂದನು.

### ಎರಡನೆಯ ಜಗದೇಕಮಲ್ಲ (ಕ್ರಿ.ಶ. ೧೧೩೮-೧೧೪೯)

ಮೂರನೇ ಸೋಮೇಶ್ವರನ ನಂತರ ಅವನ ಹಿರಿಯ ಮಗನಾದ ಎರಡನೆಯ ಜಗದೇಕಮಲ್ಲನು ಕ್ರಿ.ಶ.೧೧೩೮ರಲ್ಲಿ ಅಧಿಕಾರಕ್ಕೆ ಬಂದನು. ಇವನು ಅಸಮರ್ಥರಾಗಿದ್ದುದರಿಂದ ಸಾಮ್ರಾಜ್ಯದ ಮೇಲಿನ ಹಿಡಿತ ಸಡಿಲಗೊಂಡಿತು. ಸಿಂಹಾಸನಕ್ಕೆ ಬಂದಾಗ ಅವನಿಗೆ ತುಂಬಾ ವಯಸ್ಸಾಗಿತ್ತು. ಸುತ್ತಮುತ್ತ ಎಲ್ಲೆಲ್ಲೂ ಸಾಮಂತರ ದಂಗೆಯೇಳುತ್ತಿದ್ದರು. ಅಶಕ್ತ ದೊರೆಯಾದ ಇವನ ಕಾಲದಲ್ಲಿ ಚಾಳುಕ್ಯ ಸಾಮ್ರಾಜ್ಯ ಸಂಕುಚಿತಗೊಳ್ಳಲಾರಂಭಿಸಿತು. ಆಂಧ್ರಪ್ರದೇಶದ ಕರಾವಳಿ ಭಾಗ ಸ್ವಲ್ಪ ಸ್ವಲ್ಪವಾಗಿ ಇವನ ಹತೋಟಿಯಿಂದ ಜಾರಿತು. ಹೊಯ್ಸಳ ವಿಷ್ಣುವರ್ಧನನು ದಂಗೆ ಎದ್ದು ಕದಂಬರನ್ನು ಸೋಲಿಸಿದ, ಹಾನಗಲ್ಲ, ಬಂಕಾಪುರಗಳು ಅವನ ವಶವಾದುದಲ್ಲದೆ ಬನವಾಸಿ ಪ್ರಾಂತ್ಯದ ಅಧಿಪತ್ಯ ಕೆಲಕಾಲ ಅವನದಾಯಿತು. ಆದರೆ ಕ್ರಿ.ಶ.೧೧೪೦ರ ಸಮಯದಲ್ಲಿ ಚಾಲುಕ್ಯ ಬಲ ಸ್ವಲ್ಪ ಚೇತರಿಸಿಕೊಂಡು ಹೊಯ್ಸಳರನ್ನು ಆಕ್ರಮಿತ ಪ್ರದೇಶಗಳಿಂದ ಹೊರಗಟ್ಟಿದರೂ ಚಾಲುಕ್ಯ ಸಾಮ್ರಾಜ್ಯಕ್ಕೆ ಹೊಯ್ಸಳರು ಪೆಟ್ಟುಕೊಡುವರು ಎಂಬುದನ್ನು ಚಾಲುಕ್ಯ ದೊರೆ ಜಗದೇಕಮಲ್ಲ ಮನಗಂಡಿದ್ದನು. ಇದರ ಜೊತೆಯಲ್ಲಿಯೇ ಕಲಚೂರಿ ಮನೆತನದ ಬಿಜ್ಜಳ ಸಹ ಈ ವೇಳೆಗೆ ಪ್ರಬಲವಾಗಿ ಕಲ್ಯಾಣ ಚಾಲುಕ್ಯ ರಾಜ್ಯವನ್ನು ಕಬಳಿಸಲು ಸನ್ನದ್ಧನಾಗಿದ್ದನು. ಇಂತಹ ವಿಷಯದ ಸ್ಥಿತಿಯಲ್ಲಿ ಜಗದೇಕಮಲ್ಲ ಮೃತ್ಯು ವಶವಾದನು.

### ಮೂರನೇ ತೈಲಪ (ಕ್ರಿ.ಶ. ೧೧೪೯-೧೧೯೨)

ಕ್ರಿ.ಶ. ೧೧೪೯ರಲ್ಲಿ ಎರಡನೆಯ ಜಗದೇಕಮಲ್ಲ ಮರಣ ಹೊಂದಿದ ನಂತರ ಅವನ ಸಹೋದರ ಮೂರನೆ ತೈಲಪನು ಸಿಂಹಾಸನವನ್ನೇರಿದನು. ಏಕೆಂದರೆ ಜಗದೇಕಮಲ್ಲನಿಗೆ ಗಂಡುಮಕ್ಕಳಿರಲಿಲ್ಲ. ಮೂರನೇ ತೈಲಪನು ಅಸಮರ್ಥ ದೊರೆಯಾಗಿದ್ದರಿಂದ ಇವನ ಆಳ್ವಿಕೆಯ ಕಾಲಾವಧಿಯಲ್ಲಿ ಕಳಚೂರಿ ಬಿಜ್ಜಳ ದಂಗೆ ಎದ್ದ ಕ್ರಿ.ಶ.೧೧೫೦ರ ವೇಳೆಗೆ ತಾನೇ ಚಕ್ರವರ್ತಿ

ಎಂದು ಸಾರಿಕೊಂಡ. ರಾಜ್ಯದ ಅನೇಕ ಭಾಗಗಳ ಮೇಲೆ ಚಾಲುಕ್ಯರ ಹಿಡಿತ ತಪ್ಪಿತು. ಶಿಲಾಹರರೂ, ಕಾಕತೀಯರು, ಹೊಯ್ಸಳರು ಈ ಸದಾವಕಾಶದ ಲಾಭ ಪಡೆದುಕೊಂಡು ಸ್ವತಂತ್ರನಾಗಿ ಆಳತೊಡಗಿದರು.

## ನಾಲ್ಕನೇ ಸೋಮೇಶ್ವರ (ಕ್ರಿ.ಶ. ೧೧೮೪-೧೧೯೮)

ಮೂರನೇ ತೈಲಪನು ತಾನು ಮರಣ ಹೊಂದುವ ಪೂರ್ವದಲ್ಲಿಯೇ ತನ್ನ ಹಿರಿಯ ಮಗನಾದ ತ್ರಿಭುವನಮಲ್ಲ ನಾಲ್ಕನೆಯ ಸೋಮೇಶ್ವರನನ್ನು ಉತ್ತರಾಧಿಕಾರಿಯನ್ನಾಗಿ ನೇಮಿಸಿದ್ದನಾದರೂ ಇನ್ನಿಬ್ಬರು ರಾಜಕುಮಾರರಾದ ಮೂರನೇಯ ಜಗದೇಕಲಮಲ್ಲ ಮತ್ತು ಎರಡನೆಯ ಭೂಲೋಕಮಲ್ಲರು ಕಲ್ಯಾಣವನ್ನೇ ಬಿಟ್ಟು ಹೊರಗೆ ಹೋಗಬೇಕಾಯಿತು. ಇದೇ ವೇಳೆಗೆ ಚಾಲುಕ್ಯ ರಾಜ್ಯವು ಸಂಪೂರ್ಣವಾಗಿ ಕಲಚೂರಿಗಳ ವಶವಾಯಿತು. ಇಪ್ಪತ್ತು ವರ್ಷಗಳ ನಂತರ ಸುಮಾರು ಕ್ರಿ.ಶ.೧೧೮೪ರಲ್ಲಿ ನಾಲ್ಕನೆಯ ಸೋಮೇಶ್ವರ ತಮ್ಮ ನಂಬಿಗೆಯ ದಂಡನಾಯಕನ ಸಹಾಯದಿಂದ ರಾಜ್ಯವನ್ನು ಹಿಂದಕ್ಕೆ ಪಡೆದುಕೊಂಡ. ಆದರೆ ಅವನ ಪ್ರಯತ್ನ ಪೂರ್ಣವಾಗಿ ಸಾರ್ಥಕವಾಗಲಿಲ್ಲ. ಒಂದು ಕಡೆ ಹೊಯ್ಸಳರು ಇನ್ನೊಂದು ಕಡೆ ಸೇವುಣರೂ ಮತ್ತೊಂದು ಕಡೆ ಕಾಕತೀಯರು ಉದಯಿಸಿ ಅವರವರ ನಡುವಿನ ವಿರಸದಲ್ಲಿ ಕಲ್ಯಾಣ ಚಾಲುಕ್ಯ ರಾಜ್ಯ ಕ್ರಿ.ಶ.೧೧೮೯ರ ವೇಳೆಗೆ ಅವನತಿ ಹೊಂದಿತು. ೧೧೯೮ರ ನಂತರ ನಾಲ್ಕನೇ ಸೋಮೇಶ್ವರನ ಬಗೆಗೆ ಏನು ತಿಳಿಯುವುದಿಲ್ಲ.

**ಅಡಿಟಿಪ್ಪಣಿಗಳು:**

೧. ಕರ್ನಾಟಕ ಚರಿತ್ರೆ ಸಂಪುಟ-೨, ಪುಟ-೫೬

೨. ಅದೇ ಪುಟ-೫೬

೩. ಅದೇ ಪುಟ-೫೭

೪. ಎಸ್.ಐ.ಐ, ಸಂ-೧ ಪು ೬೩-೬೫

೫. ದಕ್ಷಿಣ ಭಾರತ ಇತಿಹಾಸ ಪು ೨೦೫

೬. ಎಪಿಗ್ರಾಫಿಯಾ ಇಂಡಿಕಾ ಸಂ. ೧೫ ಪು ೭೩

೭. ಸೌಮ್ಯ ಸಂವತ್ಸರ ೯೩೧ರಿಂದ ವಿರೋಧಿಕೃತ ಸಂವತ್ಸರ ೯೩೩

೮. ಕ.ಚ.ಸಂ. ೨ ಪು ೬೦

೯. ಅರ್ಲಿ ಹಿಸ್ಟರಿ ಆಫ್ ದಿ ಡೆಕ್ಕನ್, ಸಂ ೧, ಪು ೩೫೦

೧೦. ವಿಜ್ಞಾನೇಶ್ವರ: ಮಿತಾಕ್ಷರ ಸಂಹಿತೆ, ೧೯೧೩, ವಾಲ್ಯೂಂ-೩, ಪುಟ-೪೯೪

## ಬಿರುದಾವಳಿ : ಅರ್ಥ, ಮಹತ್ವ

ಬಿರುದು ಎಂದರೆ ಪದವಿ, ಪ್ರತಿಷ್ಠೆ, ಗೌರವ ಸೂಚಕವಾಗಿ ಕೊಡುವ ಹೆಸರು, ಹಕ್ಕು, ಸ್ವಾಮ್ಯ, ಅಧಿಕಾರ, ಶಿರೋನಾಮೆ, ಮುಖವಾಣಿ, ವರ್ಣನೆ, ಬಣ್ಣನೆ, ಹುದ್ದೆ ಮೊದಲಾದ ಅರ್ಥಗಳನ್ನು ಹೊಂದಿದೆ.

ಬಿರುದುಗಳು ನಮ್ಮ ಪ್ರಾಚೀನ ರಾಜಮನೆತನದ ಅರಸರ ಅಥವಾ ರಾಜವಂಶವನ್ನು ಪ್ರತಿಬಿಂಬಿಸುವ ಮಹತ್ವದ ಆಕರಗಳಾಗಿವೆ. ವ್ಯಕ್ತಿಗಳ ಗುಣಸ್ವಭಾವ, ಶೌರ್ಯ, ಸಾಹಸ, ಪರಾಕ್ರಮಗಳಲ್ಲದೆ ಅಂದಿನ ಘಟನಾವಳಿಗಳನ್ನೂ, ಸಾಂಸ್ಕೃತಿಕ ಅಂಶಗಳನ್ನು ಬಿಚ್ಚಿಡುವ ಸಂಗತಿಗಳಾಗಿವೆ. ಹಾಗೆಯೇ ಬಿರುದುಗಳಿಂದ ಆಯಾ ವ್ಯಕ್ತಿಗಳ ಪ್ರತಿಭೆ, ಪಾಂಡಿತ್ಯ, ವಿದ್ಯೆ, ನೃತ್ಯ, ವಿನಯ ಸಂಪನ್ನತೆ, ಸಂಸ್ಕೃತಿ, ಯುದ್ಧ, ಧಾರ್ಮಿಕ ಸ್ಥಿತಿ, ರಾಜಕೀಯ ಸ್ಥಿತಿ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯಬಹುದು.

ಬಿರುದುಗಳು ಒಬ್ಬ ವ್ಯಕ್ತಿಯ ಬದುಕನ್ನು ಬಿಚ್ಚಿಡುವ ಆಕರವಾಗಿದ್ದು, ಆತನು ಸಮಾಜದಲ್ಲಿ ಇತರರಿಗಿಂತ ಭಿನ್ನವಾದ ವ್ಯಕ್ತಿತ್ವವನ್ನು ಹೊಂದಿದ್ದನೆಂದು ತಿಳಿಯಲು ಸಹಾಯಕವಾಗಿವೆ. ಅಲ್ಲದೆ ವ್ಯಕ್ತಿಗಳ ಗುಣ ಸ್ವಭಾವವನ್ನು ತಿಳಿಸುವ ಇಂತಹ ಬಿರುದುಗಳಿಂದ ಒಂದು ರಾಜಮನೆತನದ ಚರಿತ್ರೆಯನ್ನು ಕಟ್ಟಿಕೊಡಬಹುದು. ಸಮಾಜದಲ್ಲಿ ಉನ್ನತ ಸ್ಥಾನಮಾನವನ್ನು ಹೊಂದಿರುವುದರ ಜೊತೆಗೆ ಅವರ ಕೀರ್ತಿ, ಪ್ರತಿಷ್ಠೆಗಳನ್ನು ಹರಡುವ ಹಾಗೂ ರಾಜಮನೆತನದ ಪರಮಾಧಿಕಾರವನ್ನು ಸಾರುವ ಪ್ರತಿಬಿಂಬಗಳೆಂದರೆ ಬಿರುದುಗಳೇ ಆಗಿವೆ.

ಇಂತಹ ಬಿರುದುಗಳು ಪ್ರಾಚೀನ ಕಾಲದಿಂದಲೂ ಆಳ್ವಿಕೆ ಮಾಡಿದ ಮೌರ್ಯರಿಂದ ವಿಜಯನಗರ ಕಾಲದವರೆಗೂ ಕಂಡುಬರುತ್ತವೆ. ಹೀಗೆ ಆಳ್ವಿಕೆ ಮಾಡಿದ ರಾಜಮನೆತನದಲ್ಲಿ ಪ್ರಮುಖರಾದ ಕಲ್ಯಾಣ ಚಾಲುಕ್ಯರ ಬಿರುದುಗಳನ್ನು ವಿಶೇಷ ಸ್ಥಾನವನ್ನು ಹೊಂದಿವೆ. ಅತಿ ಹೆಚ್ಚು ಶಾಸನಗಳನ್ನು ಹೊರಡಿಸಿದ ಕೀರ್ತಿಗೆ ಪಾತ್ರರಾದ ಕಲ್ಯಾಣ ಚಾಲುಕ್ಯ ಅರಸರು ಹಲವು ಪ್ರಶಸ್ತಿ ಹಾಗೂ ಬಿರುದುಗಳನ್ನು ಹೊಂದಿದ್ದರು.

ಹೀಗೆ ಇವರ ಕಾಲದ ಬಿರುದಾವಳಿಗಳ ದಾಖಲೀಕರಣ, ಅವುಗಳ ಹಿನ್ನೆಲೆ ಹಾಗೂ ಸಾಂಸ್ಕೃತಿಕ ಬದುಕನ್ನು ಬಿಚ್ಚಿಡುವುದು ಹಾಗೂ ಬಿರುದಾವಳಿಗಳನ್ನು ಅಧ್ಯಯನಕ್ಕೆ ಒಳಪಡಿಸಿ, ವಿಮರ್ಶಿಸಿ, ವಿಶ್ಲೇಷಿಸಿದಾಗ ಅವುಗಳ ಅರ್ಥ, ವ್ಯಾಪ್ತಿ ಮತ್ತು ಮಹತ್ವವನ್ನು ತಿಳಿಯಬಹುದು. ಅರಸರ, ಮಂತ್ರಿಗಳ, ರಾಣಿಯರ, ಇತರ ವ್ಯಕ್ತಿಗಳ ಪ್ರಭಾವ ಹೇಗೆ ಇತ್ತು? ಎಂದು ಹಾಗೂ ಅವರ ಬಿರುದುಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಅವರ ಮೇಲೆ ಪ್ರಭಾವ ಬೀರಿರುವ ಅಂಶಗಳನ್ನು ತಿಳಿಯಬಹುದು. ಬಿರುದುಗಳು ಶಾಸನ ಹಾಗೂ ಸಾಹಿತ್ಯಿಕ ಗ್ರಂಥಗಳಲ್ಲಿ ಕಂಡುಬರುತ್ತವೆ. ಅರಸರು ವಂಶಪಾರಾಂಪರ್ಯ ಅಥವಾ ಪಿತ್ರಾರ್ಜಿತವಾಗಿ ಬಿರುದುಗಳನ್ನು ಗಳಿಸಿರುತ್ತಾರೆ. ವಂಶಪಾರಾಂಪರ್ಯವಾಗಿ ಬಂದ ಬಿರುದುಗಳನ್ನು ಸರ್ವೇಸಾಮಾನ್ಯವಾಗಿ ಪ್ರತಿಯೊಬ್ಬರು ಧರಿಸಿದ್ದಾರೆ. ಇವುಗಳಲ್ಲಿ ಮೂಲ ನೆಲೆ, ಮೂಲಪುರುಷನ ಹೆಸರು, ತಮ್ಮ ಗೋತ್ರ ಮತ್ತು ಕುಲದೇವತೆಗಳ ಹೆಸರುಗಳು ಸೇರುತ್ತವೆ. (ಉದಾ: ಮಹಾಮಂಡಳೇಶ್ವರ ಕಲಿಯಮ್ಮರಸ ಸೋಮೇಶ್ವರ ದೇವರಲಬ್ಧವರ ಪ್ರಸಾದ ಎಂದು ಹೇಳಿಕೊಂಡಿದ್ದಾನೆ.)

ಬಿರುದುಗಳನ್ನು ಅರಸರು ತಾವೇ ಗಳಿಸಿಕೊಂಡಿದ್ದುಂಟು ಹಾಗೂ ವಂಶಪಾರಂಪರ್ಯವಾಗಿ ಬಂದದ್ದು. ಅರಸರು ತಮಗೆ ಇಷ್ಟವಾದ ಮಂಡಳೇಶ್ವರರಿಗೆ ಮೆಚ್ಚಿ ನೆಚ್ಚಿ ಬಿರುದುಗಳನ್ನು ದಯಪಾಲಿಸುತ್ತಿದ್ದರು. ಅವರವರ ಅಂಗರಕ್ಷನೆಂದು ಹಾಗೂ ಚಕ್ರವರ್ತಿ ಪಾದಾರಾಧಕರೆಂದು ಕೆಲವರು ಕರೆದುಕೊಳ್ಳುತ್ತಿದ್ದರು. ಉದಾ: ವಿಕ್ರಮಾದಿತ್ಯನ ಮಹಾಮಂಡಳೇಶ್ವರರೆಲ್ಲರೂ ಶ್ರೀಮತ್ರಿಭುವನಮಲ್ಲದೇವ ಪಾದಾರಾಧಕ ಎಂದು ಪ್ರಶಸ್ತಿಯನ್ನು ಗುಣ ಸ್ವಭಾವಗಳನ್ನು ಬಿರುದುಗಳಲ್ಲಿ ಪರಿಚಯ ಮಾಡಿಕೊಳ್ಳುತ್ತೇವೆ. ಹೀಗೆ ಬೇರೆ ಬೇರೆ ಹವ್ಯಾಸ ಬಗೆಬಗೆಯ ಕಾರ್ಯಗಳಿಂದಾಗಿ ವಿವಿಧ ತೆರನಾದ ಬಿರುದುಗಳನ್ನು ಧರಿಸಿದ್ದುದು ಶಾಸನಗಳಿಂದ ಕಂಡುಬರುತ್ತದೆ.

ಒಬ್ಬ ವ್ಯಕ್ತಿಯ ಶೌರ್ಯ, ಪರಾಕ್ರಮವನ್ನು ಈ ಬಿರುದಾವಳಿಗಳಲ್ಲಿ ನೋಡಬಹುದು. ಶೌರ್ಯ, ಪರಾಕ್ರಮವನ್ನು ವ್ಯಕ್ತಪಡಿಸುವಂಥ ವಾತಾವರಣವಿದ್ದಾಗ ಪ್ರತಿಯೊಬ್ಬ ವ್ಯಕ್ತಿ ಅವಕಾಶ ಸಿಕ್ಕಾಗ ತನ್ನ ಶೌರ್ಯವನ್ನು ಪ್ರದರ್ಶಿಸುತ್ತಿದ್ದ. ಈ ವಿಷಯ ಅವನ ಪ್ರಶಸ್ತಿಗಳಲ್ಲಿ ಬರುತ್ತದೆ. ಇವನು ಸೋಲಿಸಿದ ವೈರಿ, ಪಡೆದ ಜಯ ಮೊದಲಾದ ಮಾಹಿತಿಗಳು ಇವುಗಳಿಂದ ದೊರೆಯುತ್ತವೆ.

ಈ ಬಿರುದುಗಳನ್ನು ಇಟ್ಟುಕೊಂಡು ರಾಜಕೀಯ ಇತಿಹಾಸವನ್ನು ಕಟ್ಟಬಹುದು ಹಾಗೂ ಬಿರುದನ್ನು ಚಕ್ರವರ್ತಿ ಅಥವಾ ಮಹಾಮಂಡಲೇಶ್ವರ ತನ್ನ ಕೆಳಗಿನ ಅಧಿಕಾರಿಗಳಿಗೆ ಪ್ರೀತಿ ಸಂಕೇತವಾಗಿ ತಮ್ಮ ಹೆಸರನ್ನೇ ಅಥವಾ ತಮ್ಮ ಬಿರುದನ್ನೋ ಕೊಡುತ್ತಿದ್ದುದು ತಿಳಿದುಬರುತ್ತದೆ. ಉದಾಹರಣೆಗೆ ಪಂಪನಿಗೆ ಅರಿಕೇಸರಿ ತನ್ನ 'ಗುಣಾರ್ಣವ' ಬಿರುದನ್ನು ದಯಪಾಲಿಸಿದುದು ಇಲ್ಲಿ ನಿದರ್ಶನವಾಗಿದೆ. ವಿಕ್ರಮಾದಿತ್ಯನು ಧರಿಸುತ್ತಿದ್ದ 'ತ್ರಿಭುವನಮಲ್ಲ' ಎನ್ನುವ ಬಿರುದನ್ನು ತನು ಅಧಿಕಾರಿಗಳಿಗೆ ದಯಪಾಲಿಸಿದ್ದಾನೆ. ಈ ಅಂಶವನ್ನು ಪಿ.ಬಿ.ದೇಸಾಯಿಯವರು ತಮ್ಮ 'ಕುಂತಲೇಶ್ವರ' ಕಾದಂಬರಿಯಲ್ಲಿ ವಿಕ್ರಮಾದಿತ್ಯನ ಮಾಂಡಲಿಕ ಹೊಯ್ಸಳ ಬಿಟ್ಟಿದೇವನು ತನ್ನನ್ನು 'ತ್ರಿಭುವನಮಲ್ಲ' ಎಂದು ಕರೆದುಕೊಂಡಿರುವುದು ತಾನು ಆ ಚಕ್ರವರ್ತಿಗೆ ಸಮ, ಚಕ್ರವರ್ತಿಗೆ ತಲೆಬಾಗುವಂತಿಲ್ಲ. ಸರ್ವಸ್ವತಂತ್ರ್ಯವೆನ್ನುವ ಭಾವದಲ್ಲಿ ಎಂಬರ್ಥದಲ್ಲಿ ಹೇಳಿದ್ದಾರೆ.[೧] ಇದು ಸರಿಯಲ್ಲ, ಒಬ್ಬ ಚಕ್ರವರ್ತಿಯ ಅಥವಾ ಮಹಾಮಂಡಲೇಶ್ವರ ಬಿರುದುಗಳನ್ನು ಬೇರೆಯವನು ಧರಿಸುವುದಕ್ಕೆ ಎರಡು ಪ್ರಮುಖ ಕಾರಣಗಳಿವೆ.

೧. ಇಬ್ಬರು ಅರಸರು ಸಮಬಲರಾಗಿದ್ದ ಸಮಯದಲ್ಲಿ ಅವರಲ್ಲಿ ಸ್ಪರ್ಧೆ ನಡೆದು ಅದು ಯುದ್ಧದಲ್ಲಿ ಪರ್ಯವಸಾನವಾಗುತ್ತದೆ. ಇಂಥ ಪ್ರಸಂಗದಲ್ಲಿ ಗೆದ್ದವನು ಸೋತವನ ಬಿರುದುಗಳನ್ನೆಲ್ಲ ಬಲತ್ಕಾರದಿಂದ ಕಸಿದುಕೊಂಡು ತನ್ನ ಪ್ರಶಸ್ತಿಗಳ ಜೊತೆಗೆ ಅವುಗಳನ್ನು ಧರಿಸುತ್ತಾನೆ.[೨] ಉದಾ: ವಿಕ್ರಮಾದಿತ್ಯನು ಗಂಗರ ಬಿರುದಾದ 'ಪೆರ್ಮಾಡಿ' ಹಾಗೂ ಅವರ ಎಲ್ಲ ಪ್ರಶಸ್ತಿಗಳನ್ನು ಕಸಿದುಕೊಂಡು ಧರಿಸುತ್ತಾನೆ. ಈತನು ಕ್ರಿ.ಶ. ೧೦೫೫ರ ಹೊತ್ತಿಗಾಗಲೇ ಈ ಬಿರುದು ಧರಿಸಿದ್ದುದನ್ನು ಶಿಗ್ಗಾವಿ[೩] ಶಾಸನದಲ್ಲಿ ಬರುವುದರಿಂದ ಚಕ್ರವರ್ತಿಯಾಗುವುದಕ್ಕೆ ಮುಂಚಿತ ಅಂದರೆ ಕುಮಾರ ವೃತ್ತಿಯಿಂದ ಆಳುತ್ತಿರುವಾಗಲೇ ಗಂಗರನ್ನು ಸೋಲಿಸಿರಬೇಕು.

೨. ಚಕ್ರವರ್ತಿಯಾಗಲೀ ಮಹಾಮಂಡಳೇಶ್ವರನಾಗಲಿ ತಮಗೆ ನಿಷ್ಠೆಯನ್ನು ವ್ಯಕ್ತಪಡಿಸಿದ ಇಲ್ಲವೆ ಕಠಿಣ ಸಂದರ್ಭಗಳಲ್ಲಿ ಸಾಹಸ ಮೆರೆದ, ಇಲ್ಲವೆ ಯಾವುದೇ ಪ್ರಿಯವಾದ ಕೆಲಸ ಮಾಡಿದ ವ್ಯಕ್ತಿಗಳಿಗೆ ತಮ್ಮ ಹೆಸರನ್ನೋ, ಬಿರುದನ್ನೋ ನೀಡುತ್ತಿದ್ದರು. ಈ ಪದ್ಧತಿ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಕಂಡುಬರುತ್ತದೆ.[೪] ಹೊಟ್ಟೂರು[೫] ಶಾಸನದಲ್ಲಿ ವಿಕ್ರಮಾದಿತ್ಯನು ಗೋಡವರ ಮಾರಗಾವುಂಡನ ಮಗನಾದ 'ಕೇಶಿ'ಯನ್ನು ಮೆಚ್ಚಿ, ನೆಚ್ಚಿ ತನಗೆ ಮಗನು ಈತನೇ ಎಂದು 'ಚಾಲುಕ್ಯ ಗಂಗಪೆರ್ಮಾಡಿ' ಎಂಬ ಹೆಸರನ್ನು ಕೊಡುತ್ತಾನೆ.

**ಬಿರುದಾವಳಿಗಳು:**

ಕಲ್ಯಾಣ ಚಾಲುಕ್ಯರು ಸಮಕಾಲೀನ ಅರಸರನ್ನು ಸೋಲಿಸಿ ಸಾಮ್ರಾಜ್ಯ ರಕ್ಷಣೆ ಹಾಗೂ ಸಾಮ್ರಾಜ್ಯದ ವಿಸ್ತರಣೆ ಮಾಡಿ ಯಶಸ್ಸು ಪಡೆದುಕೊಂಡಿದ್ದುಂಟು. ಈ ಬಗೆಯ ಸಾಧನೆಯನ್ನು

ಬಿರುದುಗಳ ಮುಖಾಂತರ ಇಲ್ಲಿ ನೋಡಬಹುದಾಗಿದೆ. ಬಿರುದಾವಳಿಗಳಲ್ಲಿ ವಿವಿಧ ಬಗೆಯ ಸಂಗತಿಗಳನ್ನೂ, ಘಟನೆಗಳನ್ನೂ ಹಾಗೂ ಶೌರ್ಯ, ಪರಾಕ್ರಮ, ಗುಣಸ್ವಭಾವಗಳನ್ನು ಮುಂತಾದ ವಿಷಯಗಳನ್ನು ತಿಳಿಯಬಹುದು. ಒಟ್ಟಿನಲ್ಲಿ ಅಂದಿನ ಆಕರಗಳಲ್ಲಿ ದೊರೆಯುವ ಎಲ್ಲ ಬಗೆಯ ಬಿರುದಾವಳಿಗಳನ್ನು ಅಧ್ಯಯನಕ್ಕೆ ಒಳಪಡಿಸುವ ಯತ್ನವನ್ನು ಇಲ್ಲಿ ಮಾಡಲಾಗಿದೆ.

**೩.೧. ಅರಸರ ಬಿರುದಾವಳಿಗಳು:**

'ಯಥಾ ರಾಜಾ ತಥಾ ಪ್ರಜಾ' 'ರಾಜಾ ಕಾಲಸ್ಯ ಕಾರಣಂ' ಎಂಬ ನಾಣ್ಣುಡಿ ಎಷ್ಟೇ ಪ್ರಾಚೀನವಾದರೂ ಅದು ಎಲ್ಲ ಕಾಲಕ್ಕೂ ಸತ್ಯ. "ರಾಜನ ಜವಾಬ್ದಾರಿ ಎಷ್ಟು ದೊಡ್ಡದು, ರಾಜತ್ವದಲ್ಲಿ ಎಂತಹ ಗಹನವಾದ ತತ್ವ ಅಡಗಿದೆ. ರಾಜನು ಹೇಗೆ ಒಂದು ಯುಗದ ನಿರ್ಮಾಪಕನಾಗಿ ರಾಜ್ಯದ ಎಲ್ಲ ಆಗುಹೋಗುಗಳಿಗೂ ಸೂತ್ರಧಾರನಂತಿದ್ದಾನೆ ಎಂಬ ಮಹತ್ವಪೂರ್ಣ ಅಂಶಗಳನ್ನು ಶುಕ್ರನೀತಿ ಹೇಳುತ್ತದೆ.[೬] ೧೬ನೆಯ ಶತಮಾನದಲ್ಲಿದ್ದ ರತ್ನಾಕರವರ್ಣಿ ತನ್ನ ಶತಕವೊಂದರಲ್ಲಿ ಇದೇ ತತ್ವ ಧ್ವನಿಸುತ್ತಾನೆ. "ದೊರೆಯಂತೆ ಧರೆ, ರಾಜ ಮೆಚ್ಚಿದ್ದನ್ನು ಪ್ರಜೆಗಳು ಮೆಚ್ಚುವರು. ಅವನು ದುರ್ಮಾಗಿಯಾದಂದು ತಾನು ಹಾಳಾಗಿ, ಪ್ರಜಾಪರಿವಾರವನ್ನು ಹಾಳು ಮಾಡುವನು."[೭] ಹಾಗಲ್ಲದೆ ಒಂದು ನಾಡಿನ ದೊರೆ ದೈವಭಕ್ತನಾದಂದು ತಾನು ಉದ್ಧಾರವಾಗಿ ಪ್ರಜಾಕೋಟಿಯನ್ನು ಉದ್ಧರಿಸುವನು. ಹೀಗೆ ರಾಜನು ಆದರ್ಶ ವ್ಯಕ್ತಿ ಅವನು ತನ್ನ ನಡೆ ನುಡಿಗಳೆರಡಲ್ಲೂ ಶುದ್ಧನಾಗಿ ಇತರರಿಗೆ ಆದರ್ಶ ಪ್ರಾಯನಾಗಿರಬೇಕು. ಅಂದಾಗ ಮಾತ್ರ ಒಂದು ಮನೆತನದ ಆಡಳಿತ ವ್ಯವಸ್ಥೆ ಉತ್ತಮ ರೀತಿಯಲ್ಲಿರುತ್ತದೆ. ಅರಸನದು ಆಡಳಿತದಲ್ಲಿ ಮಹತ್ವವಾದ ಪಾತ್ರವಾಗಿರುವುದರಿಂದ ಆತನ ವ್ಯಕ್ತಿತ್ವ ಶೌರ್ಯ ಪರಾಕ್ರಮ ಗುಣಗಳು ಬಿರುದುಗಳಲ್ಲಿ ಉಲ್ಲೇಖವಾಗಿವೆ. ಆತನದು ಉನ್ನತಿಯ ಕೊನೆಯ ಸ್ಥಾನ. ಕಲ್ಯಾಣ ಚಾಲುಕ್ಯ ಅರಸರು ಸರ್ವೆಸಾಮಾನ್ಯವಾಗಿ ಸಮಸ್ತ ಭೂಮಿಗೆ ಒಡೆಯನೆಂಬುದು ವ್ಯಕ್ತವಾಗುವಂತೆ ತಮ್ಮ ಬಿರುದನ್ನು ಧರಿಸಿರುತ್ತಾರೆ. ಯುವರಾಜನಾಗಿದ್ದಾಗ ಧರಿಸಿದ ಪ್ರಶಸ್ತಿ ಮತ್ತು ಚಕ್ರವರ್ತಿಯಾದ ಮೇಲೆ ಧರಿಸಿದ ಪ್ರಶಸ್ತಿಗಳು ಬೇರೆ ಬೇರೆ. ಚಕ್ರವರ್ತಿಯಾದ ಮೇಲೆ ಅವನಿಗೆ ಯಾರು ಬಿರುದು ಕೊಡುವುದಿಲ್ಲ. ಆ ಕೆಲಸವನ್ನು ತಾನು ಇತರರಿಗೆ ಮಾಡುತ್ತಾನೆ. ಹೀಗೆ ಆಯಾ ದೇಶ ಕಾಲಘಟ್ಟಗಳಲ್ಲಿ ಆಳಿದ ಅರಸರ ಗುಣಾವಳಿಗಳ ಅನ್ವಯ ದೇಶದ ಆಡಳಿತವು ನಡೆಯುತ್ತದೆ. ಮಹತ್ವಾಕಾಂಕ್ಷೆಯಾದ ಒಬ್ಬ ಅರಸನಿಂದ ಒಂದು ರಾಜ್ಯದ ವಿಸ್ತಾರ ಹೆಚ್ಚಾಗಬಹುದು. ಕಲಾಪ್ರಿಯನಾದ ಒಬ್ಬ ಅರಸನಿಂದ ಕಲಾವಿದರಿಗೆ ನೆಲೆ ಸಿಕ್ಕಬಹುದು. ಸಾಹಿತ್ಯ ಪ್ರೇಮಿಯಾದ ಅರಸನಿಂದ ಸಾಹಿತಿಗಳಿಗೆ ಪ್ರೋತ್ಸಾಹ ದೊರಕಬಹುದು. ಪ್ರಜಾವಾತ್ಸಲ್ಯನಾದ ಒಬ್ಬ ಅರಸನಿಂದ ದೇಶ ಶಾಂತಿ-ನೆಮ್ಮದಿಗಳಿಗೆ ಆಗರವಾಗಬಹುದು. ಸದ್ಗುಣಿಯಾದ ಅರಸನಿಂದ ರಾಜ್ಯ ಸುಭಿಕ್ಷವಾಗಬಹುದು, ಧರ್ಮಪ್ರಿಯನಾದ ಅರಸನಿಂದ ನೂರಾರು ದೇವಾಲಯಗಳು

ನಿರ್ಮಾಣಗೊಂಡು ದಾನ-ದತ್ತಿಗಳನ್ನು ಪಡೆಯಬಹುದು. ಸತ್ಯ, ನ್ಯಾಯಪರವಾದ ಆಡಳಿತಾಧಿಕಾರಿಯಿಂದ ಅನ್ಯಾಯ-ಶೋಷಣೆಗಳು ದೂರಾಗಬಹುದು. ಈ ಹಿನ್ನೆಲೆಯಲ್ಲಿ ಎಲ್ಲ ಸಾಂಸ್ಕೃತಿಕ ಅಂಶಗಳನ್ನು ಬಿರುದುಗಳಲ್ಲಿ ಕಾಣಬಹುದು. ಅವುಗಳನ್ನು ಇಲ್ಲಿ ಕಾಲ ಮತ್ತು ಅರಸರಾಧಿಯಾಗಿ ಪರಿಗಣಿಸಿ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಸರ್ವೆಸಾಮಾನ್ಯವಾಗಿ ಎಲ್ಲ ಅರಸರು ಸಾಂಪ್ರದಾಯಿಕವಾಗಿ ಒಂದೇ ತೆರನಾದ ಪ್ರಶಸ್ತಿಗಳನ್ನು ವಿವಿಧ ಶಾಸನಗಳಲ್ಲಿ ಕಾಣುತ್ತೇವೆ. ಆ ಪ್ರಶಸ್ತಿಗಳು ಹಾಗೂ ಅವುಗಳ ಅರ್ಥವನ್ನು ಈ ಕೆಳಗಿನಂತೆ ಕಾಣಬಹುದು.

"ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಥ್ವೀವ
ಲ್ಲಭ ಮಹಾರಾಜಾಧಿರಾಜ ಪರ
ಮೇಶ್ವರ ಪರಮಭಟ್ಟಾರಕ ಸತ್ಯಾಶ್ರ
ಯ ಕುಳತಿಳಕ ಚಾಳುಕ್ಯಾಭರಣ
ಶ್ರೀ ಮದಾಹವಮಲ್ಲದೇವ
ಅಥವಾ
ಶ್ರೀ ಮತ್ರೈಲೋಕ್ಯಮಲ್ಲದೇವ..."

ಈ ತೆರನಾದ ಪ್ರಶಸ್ತಿಗಳ ಉಲ್ಲೇಖವನ್ನು ಅನೇಕ ಶಾಸನಗಳಲ್ಲಿ ಕಾಣುತ್ತೇವೆ. ಇವು ವಂಶಪರಂಪರೆಯಾಗಿ ಬಂದವುಗಳಾಗಿವೆ. ಎಲ್ಲ ಅರಸರು ಈ ಪ್ರಶಸ್ತಿಗಳನ್ನು ಸಾಮಾನ್ಯವಾಗಿ ಧರಿಸಿದ್ದಾರೆ.

ಸ್ವಸ್ತಿ ಎಂದರೆ ಒಳ್ಳೆಯದು, ಕ್ಷೇಮ, ಕುಶಲ ಎಂದು ಅರ್ಥ. ಸಮಸ್ತಭುವನಾಶ್ರಯನೆಂದರೆ ಪ್ರಪಂಚಕ್ಕೆ ಆಶ್ರಯನಾಗಿರುವವನು. ಶ್ರೀ ಪೃಥ್ವೀವಲ್ಲಭನೆಂದರೆ ಸಮಸ್ತ ಭೂಮಿಗೆ ಒಡೆಯ, ಮಹಾರಾಜಾಧಿರಾಜನೆಂದರೆ ಶ್ರೇಷ್ಠ ರಾಜರಲ್ಲಿಯೇ ರಾಜನಾಗಿರುವವನು. ಪರಮೇಶ್ವರನೆಂದರೆ ಬಹಳ ಶ್ರೇಷ್ಠನಾದವನು. ಪರಮಭಟ್ಟಾರಕನೆಂದರೆ ಬಹಳ ಪೂಜ್ಯನಾದವನು. ಸತ್ಯಾಶ್ರಯ ಕುಳತಿಳಕ ಸತ್ಯವಂತರಿಗೆ ಆಶ್ರಯವನ್ನು ನೀಡುವ ವಂಶದವನು, ಚಾಲುಕ್ಯಾಭರಣ ಎಂದರೆ ಚಾಳುಕ್ಯರಿಗೆ ಆಭರಣದಂತಿರುವವನು, ಶ್ರೀಮದಾಹವಮಲ್ಲ ಎಂದರೆ ಯುದ್ಧದಲ್ಲಿ ಜಟ್ಟಿ ಎಂದು ಅರ್ಥ. ಅಧಿಕ ಶಾಸನಗಳಲ್ಲಿ ಈ ಬಿರುದುಗಳನ್ನು ಕಾಣಬಹುದು. ಇಂತಹ ಬಿರುದುಗಳನ್ನು ಎಲ್ಲ ಅರಸರು ಸರ್ವೆಸಾಮಾನ್ಯವಾಗಿ ಧರಿಸಿದ್ದಾರೆ. ಅರಸನಾದವನು ಒಳ್ಳೆಯ ಗುಣವನ್ನು ಹೊಂದಿದ್ದನೆಂದು ಪ್ರಪಂಚಕ್ಕೆ ಆಶ್ರಯನಾಗಿದ್ದು, ರಾಜರಲ್ಲಿಯೇ ಶ್ರೇಷ್ಠ ಗುಣಗಳನ್ನು ಹೊಂದಿದ್ದನೆಂಬುದು ಈ ಪ್ರಶಸ್ತಿಗಳಿಂದ ತಿಳಿದುಬರುತ್ತದೆ.

## ಇಮ್ಮಡಿ ತೈಲಪ (ಕ್ರಿ.ಶ. ೯೭೩-೯೯೭)

ಇಮ್ಮಡಿ ತೈಲಪನು ಕಲ್ಯಾಣ ಚಾಲುಕ್ಯರ ಮನೆತನದ ಪ್ರಥಮ ದೊರೆ ಹಾಗೂ ಈ ವಂಶದ ಮೂಲಪುರುಷ. ಈತನು ಬಾದಾಮಿ ಚಾಲುಕ್ಯ ವಂಶಕ್ಕೆ ನೇರವಾಗಿ ಸಂಬಂಧಿಸಿದನೆಂದು ದಾಖಲೆಗಳು ಹೇಳುತ್ತವೆ. ತೈಲಪನ ವಂಶಸ್ಥರು ಬಾದಾಮಿ ಚಾಲುಕ್ಯ ಚಕ್ರಾದಿಪತ್ಯದ ಪತನದ ನಂತರ ರಾಷ್ಟ್ರಕೂಟ ಮನೆತನಕ್ಕೆ ಸಾಮ್ರಾಜ್ಯರಾಗಿ ಉಳಿಯಬೇಕಾಗಿ ಬಂದಿತ್ತು. ತೈಲಪನು ತನ್ನ ಕ್ರಮ ಸಾಧನೆಯಿಂದ ರಾಷ್ಟ್ರಕೂಟ ಚಕ್ರವರ್ತಿ ಇಮ್ಮಡಿ ಕರ್ಕನನ್ನು ಪಟ್ಟದಿಂದ ಹೊರದೂಡಿ ಕ್ರಿ.ಶ. ೯೭೩ರಲ್ಲಿ ಅಧಿಕಾರಕ್ಕೆ ಬಂದು ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಚಾಲುಕ್ಯರ ಪ್ರಭುತ್ವವನ್ನು ಸ್ಥಾಪಿಸಿದನು. ಆದರೆ ಇತ್ತೀಚಿನ ಸಂಶೋಧನೆಯ ಪ್ರಕಾರ ಇಮ್ಮಡಿ ತೈಲಪನು ಕ್ರಿ.ಶ. ೯೭೭ರಲ್ಲಿ ನಾಲ್ಕನೇ ಕನ್ನರನನ್ನು ಸೋಲಿಸಿ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದನೆಂದು ರೋಣದಲ್ಲಿ ದೊರೆತ ವೀರಗಲ್ಲುಗಳಿಂದ ತಿಳಿದುಬರುತ್ತದೆ.[೮] ಕ್ರಿ.ಶ. ೯೭೩-೯೯೭ರವರೆಗೆ ಆಳ್ವಿಕೆ ನಡೆಸಿ ತನ್ನ ೨೪ ವರ್ಷಗಳ ಕಾಲ ರಾಜ್ಯಭಾರ ಮಾಡಿದ ತೈಲಪನು ದಕ್ಷಿಣ ಭಾರತದಲ್ಲಿ ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಇವನ ಬಿರುದುಗಳಿದ್ದವು. ಶಾಸನಗಳ ಮೂಲಕ ತಿಳಿಯಬಹುದು. ಇವನಿಗೆ 'ಅಹವಮಲ್ಲ', 'ನೂರ್ಮಡಿ ತೈಲ', 'ಸತ್ಯಾಶ್ರಯ ಕುಳತಿಲಕ', 'ಗೂರ್ಜರ ಭಯಜ್ವರ' ಎಂಬ ಬಿರುದುಗಳಿದ್ದವು. 'ಅಹವಮಲ್ಲ' ಎಂದರೆ ಯುದ್ಧದಲ್ಲಿ ಜಟ್ಟಿ ಎಂದು ಅರ್ಥ. ಅಂದರೆ ಯುದ್ಧದಲ್ಲಿ ಕುಸ್ತಿಯಾಳುನಂತಿರುವನು ಅಥವಾ ಯುದ್ಧದಲ್ಲಿ ಯಜಮಾನ ಅಥವಾ ವೀರಾಳು, ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ ಗರಡಿಮಲ್ಲ ಎಂಬ ಅರ್ಥವನ್ನು ಸೂಚಿಸುತ್ತವೆ. ನೂರ್ಮಡಿ ತೈಲ ಎಂದರೆ ಪರಾಕ್ರಮದ ನೂರರಷ್ಟು ಶೌರ್ಯವುಳ್ಳವನು. ಸತ್ಯಾಶ್ರಯ ಕುಲತಿಲಕ ಎಂದರೆ ಸತ್ಯವಂತರಿಗೆ ಆಶ್ರಯ ನೀಡುವ ವಂಶದವನು. ಗೂರ್ಜರ ಭಯಜ್ವರ ಎಂದರೆ ಗೂರ್ಜರ ದೇಶದ ರಾಜನಿಗೆ ಭಯವನ್ನುಂಟು ಮಾಡುವವನು. ಇವನ ಆಡಳಿತದ ಹದಿನಾಲ್ಕು ವರ್ಷಗಳ ಶಾಸನಾವಧಿಯಲ್ಲಿ ಪಾರಮಾರ ದೊರೆ ಮಂಜನು ಹದಿನೈದು ಬಾರಿ ದಾಳಿಗೈದು ಗೆಲವು ಸಾಧಿಸಿದ್ದನು. ಆದರೆ ಹದಿನಾರನೆಯ ಬಾರಿ ಮಂಜನು ಚಾಲುಕ್ಯ ಸಾಮ್ರಾಜ್ಯದ ಮೇಲೆ ದಾಳಿಗೈದು ಉಗ್ರವಾಗಿ ಪೆಟ್ಟು ತಿನ್ನಬೇಕಾಯಿತು. ಮುಂದೆ ಯಾದವ ದೊರೆ ಬಿಲ್ಲಮನ ನೆರವು ಪಡೆದ ತೈಲಪನು ಮಂಜನನ್ನು ಸೋಲಿಸಿ "ಲಕ್ಷ್ಮೀಯು ಮಹಿಮಾವಂತನಾದ ರಣರಂಗಾಭೀಕರ ಮನ ಮನೆಯಲ್ಲಿ ಪತಿವ್ರತೆಯಾಗಿ ಇರುವಂತೆ ಮಾಡಿದನು." ಈ ಯುದ್ಧದಿಂದ ತೈಲಪನು ಮಹಾರಾಜಾಧಿರಾಜ ಸತ್ಯಾಶ್ರಯಕುಲತಿಲಕ ಎಂಬ ಬಿರುದನ್ನು ಧರಿಸಿದನು. ಹೀಗೆ ಯಾವ ಭಯವಿಲ್ಲದೆ ಇಮ್ಮಡಿ ತೈಲಪನು ಚೋಳ, ಆಂಧ್ರ, ಪಾಂಡ್ಯ ಮತ್ತು ಓರಿಸ್ಸಾ ಅರಸನನ್ನು ಸೋಲಿಸಿದನು. ತೈಲಪನ ಸಾಮ್ರಾಜ್ಯವು ದಕ್ಷಿಣದಲ್ಲಿ ತುಂಗಭದ್ರೆಯಿಂದ ಉತ್ತರದಲ್ಲಿ ಗೋದಾವರಿ ನದಿಯವರೆಗೆ ವಿಸ್ತರಿಸಿತು.

ಈ ರಾಜಮನೆತನದ ಶಾಸನಗಳು ಇವನನ್ನು ಕುಂತಳಾಧಿಪತಿಯೆಂದು ಬಣ್ಣಿಸಿದೆ. ಕ್ರಿ.ಶ.೧೦೦೭ರಲ್ಲಿ ಜೈನ ಬಸದಿಯಲ್ಲಿ ದೊರಕಿರುವ ಶಾಸನವು ಕೂಡಾ ಪಿತ್ರಾರ್ಜಿತ ಪ್ರಶಸ್ತಿಗಳ ಉಲ್ಲೇಖವನ್ನು ಹೊಂದಿದೆ. ಕ್ರಿ.ಶ. ೯೯೬ರ ಹೊಸೂರು ಶಾಸನದಲ್ಲಿ[೯] ಇಮ್ಮಡಿ ತೈಲಪನ ಆಳ್ವಿಕೆಯನ್ನು ಸಿಂಧ ಮನೆತನದ ಕೊರಲದುಗುಂದನು ಒಳ್ಳೆಯ ಪರಾಕ್ರಮಿಯಾಗಿದ್ದು, ವೈರಿಗಳಿಗೆ ಭಯಂಕರನಾಗಿದ್ದನು. ಇವನನ್ನು 'ಮುಳಗುಂದ ವಿದ್ಯಾಧರನೆಂದು' ಇದೇ ಶಾಸನದಲ್ಲಿ[೧೦] ಬಣ್ಣಿಸಿದೆ.

ತೈಲಪನು ತನ್ನ ಆಡಳಿತಾವಧಿಯಲ್ಲಿ ಹಲವಾರು ಕಷ್ಟ–ನಷ್ಟಗಳನ್ನು ಅನುಭವಿಸಿದರೂ ಕೂಡ ಕಲ್ಯಾಣದ ಚಾಲುಕ್ಯ ಸಾಮ್ರಾಜ್ಯಕ್ಕೆ ಭದ್ರ ಬುನಾದಿ ಹಾಕಿದನು. ಅವನ ಬಿರುದುಗಳಿಂದ ತಿಳಿಯುವುದು ಏನೆಂದರೆ ಅವನು ಒಬ್ಬ ದಕ್ಷ ಪರಾಕ್ರಮಿ ಎಂದು ಮಹಾರಾಜಾಧಿರಾಜ, ರಾಜಪರಮೇಶ್ವರವೆನ್ನುವ ಬಿರುದುಗಳಲ್ಲಿ ರಾಜತ್ವದ ಬಿರುದುಗಳಾಗಿದ್ದು, ಈ ಬಿರುದುಗಳಿಂದ ಅವನು ಅನೇಕ ಅರಸರೊಂದಿಗೆ ಹೋರಾಡಿ ಸ್ವತಂತ್ರ್ಯ ಆಳ್ವಿಕೆ ನಡೆಸಿ ವಿಶಾಲ ಸಾಮ್ರಾಜ್ಯ ಹಾಗೂ ಶೌರ್ಯ ಪರಾಕ್ರಮಗಳು ವ್ಯಕ್ತಗೊಳ್ಳುತ್ತವೆ. ಅಲ್ಲದೆ ಇವು ರಾಜತ್ವದ ಸಂಕೇತಗಳಾಗಿದ್ದು, ಸ್ವತಂತ್ರ್ಯನಾಗಿ ಆಳ್ವಿಕೆ ನಡೆಸಿದ್ದುದನ್ನು ಸಮರ್ಥಿಸುತ್ತವೆ. ನಿಲಗುಂದ ಶಾಸನದಲ್ಲಿ ಕೂಡಾ ಮೊದಲೇ ಉಲ್ಲೇಖ ಮಾಡಿದ ಸಾಂಪ್ರದಾಯಿಕ ಪ್ರಶಸ್ತಿಗಳನ್ನು ಕಾಣುತ್ತೇವೆ. ಇದರಲ್ಲಿ ತೈಲಪನು ಎಲ್ಲಾ ಅರಸರು ಸರ್ವೆ ಸಾಮಾನ್ಯವಾಗಿ ಹೊಂದಿದ ಪ್ರಶಸ್ತಿಗಳನ್ನು ಈತನು ಧರಿಸಿದ್ದಾನೆ.

### ಸತ್ಯಾಶ್ರಯ (ಕ್ರಿ.ಶ. ೯೯೭–೧೦೦೮)

ಸತ್ಯಾಶ್ರಯನು ಇಮ್ಮಡಿ ತೈಲಪನ ಹಿರಿಯ ಮಗನಾಗಿದ್ದು, ಕ್ರಿ.ಶ. ೯೯೭–೧೦೦೮ರವರೆಗೆ ಆಳ್ವಿಕೆ ಮಾಡಿದನು. ಈತನನ್ನು ಕುರಿತು ಕ್ರಿ.ಶ. ೧೦೦೫ರ ಎಲೆಶಿರೂರ ಶಾಸನದಲ್ಲಿ "ಚಾಲುಕ್ಯರಲ್ಲಿ ಶ್ರೇಷ್ಠನೂ ವೈರಿಯರಸ ಶಿರೋಮಣಿಗಳಿಂದ ಅಲಂಕೃತ ಪಾದಗಳುಳ್ಳವನೂ ವಿನಯಪಾಲಕನೂ ಆದ ಸತ್ಯಾಶ್ರಯನು ಶೋಭಿಸುವ ಸಿರಿಪರ್ವತದಲ್ಲಿ (ಶ್ರೀ ಪರ್ವತದಲ್ಲಿ) ಬೀಡುಬಿಟ್ಟಿದ್ದನೆಂದು[೧೧] ತಿಳಿದುಬರುತ್ತದೆ. ಕ್ರಿ.ಶ. ೧೦೦೨ರ ಗದಗ ಶಾಸನದಲ್ಲಿ[೧೨] ಇವನಿಗೆ 'ಅಹಮವಲ್ಲ', 'ಸಾಹಸಭೀಮ', 'ಚಾಲುಕ್ಯ ಮಾರ್ತಾಂಡ', 'ಇರಿವಬೆಡಂಗ', 'ಅಕಾಲವರ್ಷ' ಎಂಬ ಬಿರುದುಗಳ ಉಲ್ಲೇಖ ಕಾಣುತ್ತೇವೆ. ಇಷ್ಟೇ ಅಲ್ಲದೆ 'ಅಕಲಂಕ ಚರಿತ' ಎನ್ನುವುದು ಇನ್ನೊಂದು ತೆರನಾದ ಬಿರುದನ್ನು ಹೊಂದಿದ್ದನು. ಅಹಮವಲ್ಲ ಎಂಬ ಬಿರುದಿನಿಂದ ಆತನು ಯುದ್ಧದಲ್ಲಿ ಜಟ್ಟಿ ಅಂದರೆ ಯುದ್ಧದ ಯಜಮಾನ ಅಥವಾ ವೀರಾಳು ಎಂದರ್ಥ. ಸಾಹಸಭೀಮನೆಂಬ ಬಿರುದಿನಿಂದ ಇವನು ಸಾಹಸದಲ್ಲಿ ಭೀಮನಂತೆ ಚಾಲುಕ್ಯ ಮಾರ್ತಾಂಡನೆಂದರೆ ಚಾಲುಕ್ಯರಲ್ಲಿಯೇ ಸೂರ್ಯನಂತೆ ಹೊಳೆಯುವನು ಎಂದು, ಇರಿವಬೆಡಂಗನೆಂದರೆ ಲೀಲಾಜಾಲವಾಗಿ ಹಗೆಗಳನ್ನು ಕೊಲ್ಲುವವ, ಅಕಲಂಕ ಚರಿತ ಎಂದರೆ ಯಾವುದೇ ಕಳಂಕವಿಲ್ಲದಿರುವಿಕೆ ಎಂಬ ಅರ್ಥವನ್ನು ಸೂಚಿಸುತ್ತದೆ.

ಈತನೂ ತನ್ನ ತಂದೆಯಂತೆ ಸಮಸ್ತ ಪಿತ್ರಾರ್ಜಿತ ಪ್ರಶಸ್ತಿಗಳನ್ನು ಹೊಂದಿದ್ದಾನೆ. ಅವುಗಳನ್ನು ಮೊದಲನೇ ಪುಟದಲ್ಲಿ ಉಲ್ಲೇಖ ಮಾಡಲಾಗಿದ್ದು, ಅವುಗಳ ಅರ್ಥವನ್ನು ವಿವರಿಸಲಾಗಿದೆ. ಈತನ ಉಲ್ಲೇಖವನ್ನು ಹಲವಾರು ಶಾಸನಗಳಲ್ಲಿ ಕಾಣುತ್ತೇವೆ. ಗದಗ ಪ್ರದೇಶದ ಎಲಿಶಿರೂರ,[೧೪] ಗದಗ,[೧೫] ಲಕ್ಕುಂಡಿ.[೧೬] ಶಾಸನಗಳಲ್ಲಿ ಇರಿವಬೆಡಂಗ ಎಂದು ಈತನನ್ನು ಕರೆಯಲಾಗಿದೆ. ಈ ಎಲ್ಲ ಬಿರುದುಗಳನ್ನು ನೋಡಿದರೆ ಅವನು ಒಬ್ಬ ಪ್ರಭಾವಶಾಲಿ ವ್ಯಕ್ತಿಯಾಗಿದ್ದನೆಂದು ತಿಳಿಯಬಹುದು. ಈ ಬಿರುದುಗಳು ಶೌರ್ಯ ಸಾಮರ್ಥ್ಯಗಳನ್ನು ಮೆರೆಯುವ ಬಿರುದುಗಳೆಂದೇ ಹೇಳಬಹುದು. ಕ್ರಿ.ಶ. ೧೦೦೭ರ ಲಕ್ಕುಂಡಿ ಶಾಸನದಲ್ಲಿ ಸತ್ಯಾಶ್ರಯ ಇರಿವಬೆಡಂಗನು ಗುಜರಾಥದ ಮೇಲಿನ ದಂಡಯಾತ್ರೆಯ ಉಲ್ಲೇಖವಿದೆ.[೧೭] ಈ ಶಾಸನದ ವಿಶೇಷವೆಂದರೆ ವಾಜಿವಂಶದ ದಲ್ಲನ ಮಗನಾದ ನಾಗದೇವ ಇವನ ಹೆಂಡತಿ ಅತ್ತಿಮಬ್ಬೆ ಹಾಗೂ ಆಕೆಯ ನಾಲ್ಕು ಅದ್ಭುತ ಪವಾಡಗಳ ವಿವರಣೆ ಶಾಸನದಿಂದ ತಿಳಿದುಬರುತ್ತದೆ.

ನರಪನ ಬೆಸೆದಿಂ ಜಿನನಂ
ಶಿರದೊಳ್ ಸತಿತಾಳ್ದಿದಾನ ಚಿಂತಾಮಣಿನಿ
ರ್ಬರ ಗೋದಾವರಿಯಂ ಪುಗೆ
ಪರಿಯುಡುಗಿದುದೆಂದೂಡೊಳ್ಪನದೇನೇವೇಳ್ವೆಂ ॥[೧೭]

ಮದೂತ್ಕರಿಸೆರೆಯಂ ಪರಿ
ದೊದವಿದ ಮುಳಿಸಿಂದೆಬೋರನೆಯ್ತಂದೊಡೆದ।
ರ್ಕದಿದಂದರೆ ಭಕ್ತಿಯಿಂದುದು
ಪದಯುಗಕೆರಗಿದುದು ದಾನ ಚಿಂತಾಮಣಿ॥[೧೮]

ಮುದದರ್ಚಿಪ ಜಿನಬಿಂಬಂ
ನದಿಯೊಳ್ ಕಯ್ಬುರ್ದುಕಿ ಬಿಳ್ದೊಡದು ಬಪ್ಪಿ ನಮು
ಣ್ಣದನು (ಳಿ) ದಿರಲೆಂಟುದಿನ
ಕ್ಕದು ಬಂದದುಕಯ್ಗೆ ದಾನಚಿಂತಾಮಣಿಯ[೧೯]

ಪ್ರ(ಳ) ಯಾಗ್ನಿಯಂತೆ ಕಟಕಮ
ನೊಳಕೊಂಡಳುರ್ವಗ್ನಿ ದಾನಚಿಂತಾಮಣಿ ನಿ
ರ್ಮಳ (ಜಿ) ನಗಂಧೋದಕಮಂ
ತಳಿಯಲ್ಕುಪಶಮಿಸಿತೆಂದೂಡೇವ (ಣ) ಸುವೆ ॥[೨೦]

ಈ ನಾಲ್ಕು ಅದ್ಭುತ ಪವಾಡಗಳ ವಿವರಣೆ ಶಾಸನದಲ್ಲಿದೆ. ಮೊದಲನೆಯ ಪವಾಡವೇನೆಂದರೆ ಚಾಲುಕ್ಯ ಸೈನ್ಯವು ವೈರಿ ಸೈನ್ಯವನ್ನು ಎದುರಿಸಲು ಗೋದಾವರಿ ನದಿಯನ್ನು

ದಾಟಿ ಹೋಗಬೇಕಿತ್ತು. ಆದರೆ ಗೋದಾವರಿ ನದಿ ತುಂಬಿ ಹರಿಯುತ್ತ ಭೋರ್ಗರೆಯುತ್ತಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ತನ್ನ ದೊರೆಯನ್ನು ನದಿಯಿಂದ ಪಾರುಮಾಡಲು ಅತ್ತಿಮಬ್ಬೆಯು ಭಾವಭಕ್ತಿಯಿಂದ ಆಂತರಿಕವಾಗಿ ಜಿನ ನಾಮಸ್ಮರಣೆ ಮಾಡುತ್ತ ನದಿಯ ನೀರನಲ್ಲಿ ಇಳಿಯುತ್ತಿದ್ದಂತೆ ಗೋದಾವರಿ ಮಾತೆಯು ಹರಿಯುತ್ತಿರುವ ತನ್ನ ಪ್ರವಾಹವನ್ನು ನಿಲ್ಲಿಸಿ ಸೈನ್ಯಕ್ಕೆ ದಾರಿಮಾಡಿಕೊಟ್ಟಿತು.

ಎರಡನೆಯ ಪವಾಡವೆಂದರೆ ಮದವೇರಿದ ಆನೆ ಕಟ್ಟನ್ನು ಹರಿದುಕೊಂಡು ಬೀದಿಗಳಲ್ಲಿ ಹುಚ್ಚಾಪಟ್ಟೆ ಓಡುತ್ತಿರುವಾಗ, ಗಾಬರಿಯಾದ ಜನ ಅತ್ತಿಮಬ್ಬೆಯಲ್ಲಿ ಬಂದು ಈ ಪ್ರಸಂಗವನ್ನು ಹೇಳುತ್ತಾರೆ. ಶಾಂತಚಿತ್ತಳಾಗಿದ್ದ ಅತ್ತಿಮಬ್ಬೆ ಅದೇ ಗಾಂಭೀರ್ಯದಿಂದ 'ಣ' ಮೋಕಾರ ಮಂತ್ರ ಹೇಳುತ್ತಾ ಆನೆಯ ಹೆಸರು ಕರೆದು ಈ ಉನ್ಮತ್ತ ಕಾರ್ಯವನ್ನು ಬಿಡಲು ಹೇಳಿದ ಕೂಡಲೇ ಸೊಕ್ಕೇರಿದ ಆನೆ ತನ್ನ ಮದ ಕಳೆದುಕೊಂಡು ಅತ್ತಿಮಬ್ಬೆಯ ಕಾಲಿಗೆರಗಿತು.[೨೧]

ಮೂರನೆಯ ಪವಾಡವೆಂದರೆ ನದಿಯಲ್ಲಿ ಪ್ರಯಾಣಿಸುವಾಗ ಮುದದಿಂದ ಪೂಜಿಸುತ್ತಿದ್ದ ಜಿನಬಿಂಬ ನದಿಯಲ್ಲಿ ಕೈಜಾರಿ ಬೀಳುತ್ತದೆ. ಆಗ ಚಿಂತಾಕ್ರಾಂತಳಾದ ಅತ್ತಿಮಬ್ಬೆ ಆಹಾರ, ನೀರು ತೊರೆದು ಜೈನ ಮಂದಿರದಲ್ಲಿ 'ಣ' ಮೋಕಾರ ಮಂತ್ರ ಜಪಿಸುತ್ತಾ ಕುಳಿತು ಬಿಡುತ್ತಾಳೆ. ಎಂಟು ದಿನಗಳ ನಂತರ ಆ ಜಿನಬಿಂಬವೇ ಮರಳಿ ಅತ್ತಿಮಬ್ಬೆ ಕೈ ಸೇರುತ್ತದೆ.[೨೨]

ಕೊನೆಯ ಪವಾಡವೆಂದರೆ ಬ್ರಹ್ಮಾಂಡವನ್ನೇ ಸುಟ್ಟುಹಾಕುವ ಪ್ರಳಯಾಗ್ನಿಯೊಂದು ಚಾಲುಕ್ಯರ ಸೈನ್ಯವು ಬೀಡುಬಿಟ್ಟ ಸ್ಥಳದಲ್ಲಿ ಕಾಣಿಸಲಾಗಿ ದಿಕ್ಕೆಟ್ಟ ಜನ ಅತ್ತಿಮಬ್ಬೆಯಲ್ಲಿಗೆ ಬಂದು ನಡೆದು ಘಟನೆಯನ್ನು ವಿವರಿಸುತ್ತಾರೆ. ಆಗ ಅತ್ತಿಮಬ್ಬೆಯಲ್ಲಿ ಬಂದು ನಡೆದ ಘಟನೆಯನ್ನು ವಿವರಿಸುತ್ತಾರೆ. ಆಗ ಅತ್ತಿಮಬ್ಬೆ ಜಿನ ಗಂಧೋದಕವನ್ನು ಅಗ್ನಿಗೆ ಚಿಮುಕಿಸಲು ಅಗ್ನಿ ಮರುಕ್ಷಣದಲ್ಲಿ ಉಪಶಮನವಾಯಿತು.[೨೩] ಹೀಗೆ ಸತ್ಯಾಶ್ರಯನ ಶಾಸನಗಳು ಮತ್ತು ಅದರಲ್ಲಿನ ಅತ್ತಿಮಬ್ಬೆ ಘಟನೆಗಳು ಇವನ ಆಳ್ವಿಕೆ ಗದಗ ಪ್ರದೇಶದಲ್ಲಿ ಸ್ಪಷ್ಟಪಡಿಸುತ್ತವೆ.[೨೪]

ರನ್ನನು "ಅಜಿತ ತೀರ್ಥಂಕರ ಪುರಾಣ ತಿಲಕಂ ಸಾಹಸ ಭೀಮ ವಿಜಯಂ'ದಲ್ಲಿ ಕಾವ್ಯ ನಾಯಕನಾದ 'ಸಾಹಸಭೀಮ' ನೊಂದಿಗೆ ತನ್ನ ಆಶ್ರಯದಾತ ಸತ್ಯಾಶ್ರಯನನ್ನು ಹೊಗಳಿದ್ದಾನೆ. ಸತ್ಯಾಶ್ರಯನಿಗಿರುವ ಬಿರುದುಗಳನ್ನು ಭೀಮನಿಗೂ ಅನ್ವಯಿಸಿದ್ದಾನೆ. ಅನೇಕ ಪ್ರಶಸ್ತಿಗಳಲ್ಲಿ ವಿಶೇಷವಾಗಿ ಬಳಸಿರುವುದು 'ಚಾಳುಕ್ಯ ಕಂಠೀರವ' ಎಂಬುದು. ಪಾಂಡವರಲ್ಲಿ ಭೀಮನು ಆನೆಯ ಬಲವನ್ನು ಸಿಂಹದ ಸಾಹಸವನ್ನು ಮೆರೆದವನಾದ್ದರಿಂದಲೂ ಚಾಲುಕ್ಯರಲ್ಲಿ ಸತ್ಯಾಶ್ರಯನು 'ಇಱಿವ ಬೆಡಂಗ'ನಾಗಿ ಸಿಂಹ (ಕಂಠೀರವ) ಸಾಹಸವನ್ನು ತೋರಿದ್ದವನಾದ್ದ ರಿಂದಲೂ 'ಚಾಳುಕ್ಯ ಕಂಠೀರವ' ವಿಶೇಷವಾಗಿ ಇಬ್ಬರಿಗೂ ಒಪ್ಪುತ್ತದೆ.[೨೫]

ಇದರಂತೆ ಸತ್ಯಾಶ್ರಯನಿಗೆ 'ಚಾಳುಕ್ಯ ಕಂದರ್ಪ' ಎಂಬ ಬಿರುದು ಇದ್ದುದನ್ನು ರನ್ನ ಬಲ್ಲ. ಇದೇ ಪ್ರಕಾರವಾಗಿ 'ಕುಮರಂಕರಾಮ', 'ಪರಸೈನ್ಯ ಭೈರವ', 'ಇರಿವಬೆಡಂಗ' ಮುಂತಾದ

ರಾಜ್ಯ ಪ್ರಶಸ್ತಿಗಳನ್ನು ಯಥೋಚಿತವಾಗಿ ಉಪಯೋಗಿಸಿದ್ದಾನೆ. 'ಸತ್ಯಾಶ್ರಯ' ಎಂಬ ಅಂಕಿತನಾಮವನ್ನು ಅಕ್ಕರೆಯಿಂದ ಅಪಭ್ರಂಶಗೊಳಿಸಿ 'ಸತ್ತಿಗ' ಎಂದು ಶಾಸನಗಳಲ್ಲಿ ಪ್ರಯೋಗಿಸಿರುವುದುಂಟು.[೨೬]

ಚಾಳುಕ್ಯ ಕಂದರ್ಪ ಎಂದರೆ ಚಾಳುಕ್ಯರಲ್ಲಿ ಮನ್ಮಥನಂತೆ, ಪರಸೈನ್ಯ ಭೈರವ ಎಂದರೆ ಸೈನ್ಯದಲ್ಲಿ ಭಯಂಕರವಾಗಿರುವವನು ಅಥವಾ ಭಯಂಕರ ವೀರನಾಗಿರುವವನು ಎಂದರ್ಥ. ಕ್ರಿ.ಶ. ೧೦೦೭ರ ಲಕ್ಕುಂಡಿ ಶಾಸನವು ಇವನ ದಂಡನಾಯಕ ನಾಗದೇವನು ಲಕ್ಕುಂಡಿ ಉಸ್ತುವಾರಿ ನೋಡಿಕೊಳ್ಳುತ್ತಿದ್ದನು ಎಂದೂ ದಾನಚಿಂತಾಮಣಿ ಅತ್ತಿಮಬ್ಬೆಗೆ ರಾಜಾಶ್ರಯ ನೀಡಿದ್ದನೆಂದೂ, ಈತನ ಕಾಲಾವಧಿಯಲ್ಲಿ ಜೈನ ಧರ್ಮವು ಪ್ರಸಿದ್ಧಿ ಪಡೆದಿರುವ ಬಗ್ಗೆ ಹೇಳಿದೆ. ಈ ಎಲ್ಲ ಅಂಶಗಳಿಂದ 'ಲಕ್ಕುಂಡಿ' ಇರಿವಬೆಡಂಗನ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಲು ಸಾಧ್ಯವಾಗಿದೆ. ಸತ್ಯಾಶ್ರಯನಿಗೆ ಒಬ್ಬ ಮಗಳಿದ್ದಳು ಅವಳನ್ನು ನೊಳಂಬ ಪಲ್ಲವರಾಜ ಇರಿವನೊಳಂಬಾಧಿರಾಜನಿಗೆ ಮದುವೆ ಮಾಡಿಕೊಟ್ಟನು. ಸತ್ಯಾಶ್ರಯನಿಗೆ ಗಂಡು ಮಕ್ಕಳಿದ್ದಂತೆ ತೋರುವುದಿಲ್ಲ. ಮೇಲಿನ ಎಲ್ಲ ಬಿರುದುಗಳು ರಾಜತ್ವದ ಸಂಕೇತಗಳಾಗಿದ್ದು ಆತನು ಯಾವ ರೀತಿ ತನ್ನ ಶೌರ್ಯ-ಪರಾಕ್ರಮ ಮೆರೆದನೆಂಬ ಬಗ್ಗೆ ಮಾಹಿತಿ ನೀಡುತ್ತವೆ.

### ಐದನೆಯ ವಿಕ್ರಮಾದಿತ್ಯ (ಕ್ರಿ.ಶ. ೧೦೦೯-೧೦೧೮)

ಸತ್ಯಾಶ್ರಯನಿಗೆ ಗಂಡುಮಕ್ಕಳಿಲ್ಲದ್ದರಿಂದ ಅವನ ತಮ್ಮ ದಶವರ್ಮನ ಮಗನಾದ ಐದನೆಯ ವಿಕ್ರಮಾಧಿತ್ಯ ಪಟ್ಟಕ್ಕೆ ಬಂದನು. ಇವನು ಅಷ್ಟೇನು ಪ್ರಭಾವಶಾಲಿಯಾಗಿರಲಿಲ್ಲವಾಗಿದ್ದರಿಂದ ದಕ್ಷಿಣದ ಚೋಳರು, ಉತ್ತರದ ಪಾರಮಾರ ಅರಸ ಭೋಜನು ಇವನ ರಾಜ್ಯವನ್ನು ಮುತ್ತಿದರು. ರಾಜ್ಯವನ್ನು ವೈರಿಗಳಿಂದ ಕಾಪಾಡಿಕೊಳ್ಳಲು ತುಂಬಾ ಕಷ್ಟಪಡಬೇಕಾಯಿತು. ಇವನದು ಅಲ್ಪ ಅವಧಿಯ ಆಳ್ವಿಕೆ ಹೀಗಾಗಿ ಈತನ ಕಾಲದ ಶಾಸನಗಳು ವಿರಳವಾಗಿಯಲ್ಲದೆ ಅವು ಯಾವುದೇ ಮಹಾನ್ ಘಟನೆಯನ್ನು ಉಲ್ಲೇಖಿಸುವುದಿಲ್ಲ. ಮಾಸವಾಡಿ - ೧೪೦ರ ನಾಡಿನಲ್ಲಿ ದೊರೆತ ಕ್ರಿ.ಶ. ೧೦೧೦ರ ಆಲೂರ ಶಾಸನದಲ್ಲಿ 'ತ್ರಿಭುವನಮಲ್ಲ' ಎಂಬ ಬಿರುದನ್ನು ಪಡೆದಿದ್ದ ಐದನೇ ವಿಕ್ರಮಾಧಿತ್ಯನ ಆಳ್ವಿಕೆಗೆ ಸಂಬಂಧಿಸಿದ್ದು, ಸಿರವೂರದ ಅಮರಭಟ್ಟಾರಕರಿಗೆ ವೆಣ್ಣೆಯಭಟ್ಟರು ಆಲೂರದಲ್ಲಿ ಬಿಟ್ಟ ಭೂ ದಾನವನ್ನು ಉಲ್ಲೇಖಿಸುತ್ತದೆ. ನವಲೆ ಗ್ರಾಮದಲ್ಲಿನ ಕ್ರಿ.ಶ. ೧೦೧೪ರ ಶಾಸನವು ಐದನೆಯ ವಿಕ್ರಮಾದಿತ್ಯನ ಆಳ್ವಿಕೆಯನ್ನು ಸೂಚಿಸುತ್ತದೆ.[೨೭] ಇತನ ಇನ್ನೊಂದು ಬಿರುದು ವಲ್ಲಭ ನರೇಂದ್ರ ಎಂದು. ವಲ್ಲಭನರೇಂದ್ರ ಎಂದರೆ ನಾಯಕರಲ್ಲಿಯೇ ಶ್ರೇಷ್ಠ ಎಂದು ಅರ್ಥ. ಈತನು ಸ್ವರ್ಗ, ಮೃತ್ಯು ಮತ್ತು ಪಾತಾಳಗಳೆಂಬ ಮೂರು ಲೋಕಗಳ ಒಡೆಯನೆಂದು ಈತನ ಬಿರುದುದಾದ 'ತ್ರಿಭುವನಮಲ್ಲ' ಎಂಬ ಬಿರುದಿನಿಂದ ತಿಳಿದುಕೊಳ್ಳಬಹುದು. ನೊಳಂಬವಾಡಿ-೩೨,೦೦೦, ಕೆಂಗಲಿ-೫೦೦, ಬಳ್ಳಿಕುಂದೆ-೩೦೦, ಕುಕನೂರು-೩೦ ಹಾಗೂ

ಮಾಸವಾಡಿ-೧೪೦ರ ದೇಶದ ಐದು ನಗರಗಳ ಅಧಿಪತಿಯಾಗಿದ್ದನೆಂಬುದರ ಬಗ್ಗೆ ಶಾಸನಾಧಾರಗಳಿವೆ. ಇವನು ದುರ್ಬಲನಾಗಿದ್ದರಿಂದ ಈತನ ಸ್ಥಾನಕ್ಕೆ ಅಯ್ಯಣನು ಬಂದನು. ಈತನದು ಅಲ್ಪ ಆಳ್ವಿಕೆ ಇವನ ಬಗೆಗೆ ಯಾವುದೇ ಶಾಸನಗಳು ವಿಪುಲವಾಗಿ ಲಭ್ಯವಾಗಿಲ್ಲ.

**ಇಮ್ಮಡಿ ಜಯಸಿಂಹ (ಕ್ರಿ.ಶ. ೧೦೧೫-೧೦೪೪)**

ಅಯ್ಯಣ ನಂತರ ಅಧಿಕಾರಕ್ಕೆ ಬಂದವನು ಇಮ್ಮಡಿ ಜಯಸಿಂಹ ಇವನ ಅಧಿಕಾರಾವಧಿಯಲ್ಲಿ ಕ್ರಿ.ಶ. ೧೦೩೦ರಲ್ಲಿ ಕೊಪ್ಪದ ಮನೆಯ ಹಿತ್ತಲದಲ್ಲಿ ದೊರಕಿರುವ ಶಾಸನ ೯೫ ತಿಳಿಸುವುದೇನೆಂದರೆ ಸಾಂಪ್ರದಾಯಿಕವಾಗಿ ಕಲ್ಯಾಣ ಚಾಲುಕ್ಯರು ಧರಿಸುವ ಎಲ್ಲ ಪ್ರಶಸ್ತಿಗಳನ್ನು ಈತನು ಹೊಂದಿದ್ದು, ಅವುಗಳನ್ನು ನಾವು ಮೊದಲನೇ ಪುಟದಲ್ಲಿ ಉಲ್ಲೇಖ ಮಾಡಲಾಗಿದೆ. ಇಷ್ಟೇ ಅಲ್ಲದೇ 'ಜಗದೇಕಮಲ್ಲ', 'ಕುಮಾರ ಗಜಕೇಸರಿ', 'ಕೀರ್ತಿವಿದ್ಯಾಧರ', 'ಗಂಡರಗಂಡ', ಸತ್ಯರತ್ನಾಕರ ಮುಂತಾದ ವಿಶೇಷ ಬಿರುದುಗಳಿದ್ದವು.[೫೮] ತ್ರೈಲೋಕ್ಯಮಲ್ಲ, ಮಲ್ಲಿಕಾಮೋದ, ವಿಕ್ರಮಸಿಂಹ, ಈ ಬಿರುದುಗಳನ್ನು ಗದಗ ಹಾಗೂ ಮುಳಗುಂದ ಶಾಸನಗಳಲ್ಲಿ ನೋಡುತ್ತೇವೆ. ಸಾಂಪ್ರದಾಯಿಕವಾಗಿ ಬಂದ ಬಿರುದುಗಳು ಮುಳುಗುಂದದ ಶಾಸನದಲ್ಲೂ[೫೯] ಹಾಗೂ ಹೊಸೂರು ಶಾಸನದಲ್ಲೂ ಬಂದಿವೆ.[೬೦] ಜಯಸಿಂಹನ ಕಾಲದಲ್ಲಿಯೂ ಮುಳುಗುಂದ ಒಂದು ಪ್ರಮುಖ ರಾಜಕೀಯ ಪ್ರದೇಶವಾಗಿದ್ದು ಈತನು ರಾಜ್ಯವನ್ನು ಉತ್ತರೋತ್ತರಾಭಿವೃದ್ಧಿ ಪ್ರವರ್ಧ ಮಾನಮಾನಚಂದ್ರಾರ್ಕ ತಾರಂಬರಮಾಗಿ ಸಲಹುತ್ತಿದ್ದನೆಂದು ಹೊಸೂರು ಶಾಸನದಿಂದ ತಿಳಿದುಬರುತ್ತದೆ.[೬೧] ಇವನನ್ನು 'ತ್ರಿಭುವನಮಲ್ಲದೇವ' ಎಂದೂ ಕರೆಯಲಾಗಿದೆ. 'ಜಗದೇಕಮಲ್ಲ' ಎಂದರೆ ಜಗತ್ತನ್ನೇ ಗೆಲ್ಲುವ ವೀರನೆಂದು, ಕುಮಾರಗಜಕೇಸರಿ ಎಂದರೆ ಆನೆಯ ಬಲವುಳ್ಳವನು ಎಂದೂ, ಕೀರ್ತಿ ವಿದ್ಯಾಧರನೆಂದರೆ ವಿದ್ಯೆಯಲ್ಲಿ ಹೆಸರುಳ್ಳವನೆಂದು, ಗಂಡರಗಂಡನೆಂದರೆ ಅತ್ಯಂತ ಪರಾಕ್ರಮಿ ಯೋಧನೆಂದೂ, ತ್ರೈಲೋಕ್ಯಮಲ್ಲನೆಂದರೆ ಮೂರು ಲೋಕಗಳಲ್ಲಿಯೂ ವೀರನೆಂದು ಪ್ರಸಿದ್ಧನಾದವನು. ಮಲ್ಲಿಕಾಮೋದನೆಂದರೆ ಮಲ್ಲಿಗೆಯ ಸುವಾಸನೆ ಹರಡುವ ಕೀರ್ತಿಯುಳ್ಳವನು. ವಿಕ್ರಮಸಿಂಹ, ಸಿಂಹದಂತಹ ಹೆಜ್ಜೆಯಿಡುವವನು ಎಂದು ಎಲ್ಲಾ ಬಿರುದುಗಳ ಅರ್ಥವನ್ನು ವಿವರಿಸಬಹುದು. ಈತನ ಬಿರುದುಗಳನ್ನು ಗಮನಿಸಿದರೆ ಜಯಸಿಂಹ ಅಧಿಕಾರಕ್ಕೆ ಬಂದಾಗ ರಾಜ್ಯದ ಎಲ್ಲ ಮೇರೆಗಳಲ್ಲೂ ಶತ್ರುಗಳು ಯುದ್ಧ ಸನ್ನದ್ಧರಾಗಿದ್ದರು. ಪಾರಮಾರ ಭೋಜ, ಕಳಚೂರಿ ಗಾಂಗೇಯದೇವ ಹಾಗೂ ದಕ್ಷಿಣದ ರಾಜೇಂದ್ರ ಚೋಳ ಇವರು ಕಲೆತು ಕರ್ನಾಟಕದ ಮೇಲೆ ಎರಗಿದರು. ಭೋಜ ಕೊಂಕಣವನ್ನು ಆಕ್ರಮಿಸಿದ. ರಾಜೇಂದ್ರ ಚೋಳ ಚಾಳುಕ್ಯ ರಾಜಧಾನಿಯನ್ನು ಮುತ್ತಿ ಸುಟ್ಟನು. ಆದರೆ ಕೂಡಲೇ ಚೇತರಿಸಿಕೊಂಡ ಜಯಸಿಂಹ ಭೋಜನನ್ನು ಸೋಲಿಸಿ ಹಿಂದಕ್ಕೆ ಅಟ್ಟಿದ. ಕೊಂಕಣವನ್ನು ಪುನಃ ಆಕ್ರಮಿಸಿ ಸಪ್ತಕೊಂಕಣಾಧೀಶ್ವರರ ಸಂಪತ್ತನ್ನು ಸೂರೆಗೊಂಡ. ಇದರಿಂದ ಇವನಿಗೆ 'ಸಪ್ತಕೊಂಕಗಣಾಧೀಶ್ವರ' ಎಂಬ ಬಿರುದು

ಬಂದಿತು. ಸೇವುಣ ಮೂರನೇ ಭಿಲ್ಲಮನನ್ನು ಸೋಲಿಸಿದ ಬಳಿಕ ಆತನಿಗೆ ತನ್ನ ಮಗಳಾದ ಅವ್ವಲದೇವಿಯನ್ನು ವಿವಾಹ ಮಾಡಿಕೊಟ್ಟು ಅವನ ವಿಧೇಯತೆಯನ್ನು ಗಳಿಸಿದ. ರಾಜ್ಯಕ್ಕೊದಗಿದ ವಿಪತ್ತನ್ನು ಅಧಿಕಾರಕ್ಕೆ ಬಂದ ಕೂಡಲೇ ಹೀಗೆ ಪರಿಹರಿಸಿಕೊಂಡ ಜಯಸಿಂಹನಿಗೆ, ಉತ್ತರದ ಅರಸರಿಂದ ಅನಂತರ ಹೆಚ್ಚಿನ ತೊಂದರೆ ಉಂಟಾಗಲಿಲ್ಲ. ಆದರೆ ದಕ್ಷಿಣದಲ್ಲಿ ರಾಜೇಂದ್ರ ಚೋಳ ಮಾತ್ರ ತನ್ನ ಆಕ್ರಮಣವನ್ನು ಬಿಡಲಿಲ್ಲ. ವೆಂಗಿಯ ರಾಜಕೀಯ ಇದಕ್ಕೆ ಒಳ್ಳೆಯ ಕಾರಣವನ್ನು ಒದಗಿಸಿ ಚಾಳುಕ್ಯ ಚೋಳ ಯುದ್ಧಗಳಲ್ಲಿ ಇವನ ಕಾಲದಲ್ಲಿ ನಡೆಯುತ್ತಲೇ ಇದ್ದವು. ತನ್ನ ಆಳ್ವಿಕೆಯ ಉದ್ದಕ್ಕೂ ಯುದ್ಧನಿರತನಾಗಿದ್ದ ಜಯಸಿಂಹನಿಗೆ ಈ ಸಮಯದಲ್ಲಿ ಮೇಲಿನ ಬಿರುದುಗಳು ಬಂದಿರಬಹುದು. ಈತನು ಸು. ೧೦೪೪ರಲ್ಲಿ ಮೃತನಾದ. ಈತನ ಎಲ್ಲ ಬಿರುದುಗಳನ್ನು ಗಮನಿಸಿದರೆ ಸ್ವತಂತ್ರ್ಯ ಆಳ್ವಿಕೆ, ವಿಶಾಲ ಸಾಮ್ರಾಜ್ಯ ಹಾಗೂ ಶೌರ್ಯ-ಪರಾಕ್ರಮಗಳು ವ್ಯಕ್ತಗೊಳ್ಳುತ್ತವೆ. ಈತನ ಸಾಂಪ್ರದಾಯಿಕ ಬಿರುದುಗಳು ರಾಜತ್ವದ ಸಂಕೇತಗಳಾಗಿದ್ದು, ಮೊದಲೇ ತಿಳಿಸಿದಂತೆ ಆತನ 'ಮಲ್ಲಿಕಾಮೋದ' ಬಿರುದು ನೋಡಿದರೆ ಇವನಿಗೆ ಮಲ್ಲಿಗೆ ಹೂಗ ಪ್ರಿಯನೆಂದು ಕರೆದುಕೊಂಡಿರಬೇಕು. ಇದು ಅವನ ವಿಲಾಸ ಪ್ರಜ್ಞೆಗೆ ಸಾಕ್ಷಿಯಾಗಿದೆ.

**ಒಂದನೇ ಸೋಮೇಶ್ವರ (ಕ್ರಿ.ಶ. ೧೦೪೫-೧೦೬೮)**

ಒಂದನೇ ಜಗದೇಕಮಲ್ಲ ಅಥವಾ ಇಮ್ಮಡಿ ಜಯಸಿಂಹನು ಮೃತನಾದ ಬಳಿಕ ಅವನ ಹಿರಿಯ ಮಗ ಒಂದನೇ ಸೋಮೇಶ್ವರನು ಪಟ್ಟಕ್ಕೆ ಬಂದನು. ಜಯಸಿಂಹನ ಕಾಲದಲ್ಲಿದ್ದ ಪರಿಸ್ಥಿತಿ ಇವನ ಕಾಲದಲ್ಲೂ ಮುಂದುವರಿಯಿತು. ಈತ ಆಳಿದ ೨೫ ವರ್ಷಗಳ ಕಾಲವು ದಕ್ಷಿಣ ಭಾರತ ಒಂದು ವಿಶಾಲವಾದ ರಣರಂಗವಾಗಿ ಪರಿವರ್ತಿತವಾಯಿತೆನ್ನಬಹುದು. ಕರ್ನಾಟಕದ ಹಾಗೂ ತಮಿಳುನಾಡಿನ ಎರಡು ಪ್ರಮುಖ ಅರಸು ಮನೆತನಗಳ ನಡುವೆ ಈ ವರ್ಷಗಳಲ್ಲಿ ಹಿರಿಮೆಗಾಗಿ ತೀವ್ರವಾದ ಪೈಪೋಟಿಯುಂಟಾಯಿತು.

ಚೋಳ ರಾಜಾಧಿರಾಜ ಮತ್ತು ಸೋಮೇಶ್ವರ ಇವರ ನಡುವೆ ವಿಶೇಷವಾಗಿ ವೆಂಗಿ ಪ್ರದೇಶದ ಆಕ್ರಮಣಕ್ಕಾಗಿ ಐದು ಬಾರಿ ಘರ್ಷಣೆ ಉಂಟಾದವು. ಚಾಳುಕ್ಯ ಶಾಸನಗಳು ಮತ್ತು ಚೋಳ ಶಾಸನಗಳು ಅವರವರ ಬಲ ಮೇಲುಗೈಯಾಗಿತ್ತೆಂದು ವರ್ಣಿಸುವುದು ಸಾಮಾನ್ಯ. ಈ ಯುದ್ಧಗಳಲ್ಲಿ ಚಾಳುಕ್ಯ ಯುವರಾಜ ಜಯಸಿಂಹ ಮತ್ತು ಚೋಳ ರಾಜಾಧಿರಾಜ ಸತ್ತರೆಂಬ ಅಂಶಗಳು ಸ್ಪಷ್ಟ

'ಅಹಮಮಲ್ಲ', 'ತ್ರೈಲೋಕಮಲ್ಲ', ಬಿರುದುಗಳಿಸಿದ್ದ ಒಂದನೇಯ ಸೋಮೇಶ್ವರ ಕಲ್ಯಾಣದ ಚಾಳುಕ್ಯರ ಚರಿತ್ರೆಯಲ್ಲಿ ಒಂದು ಹೊಸ ಯುಗವನ್ನು ಪ್ರಾರಂಭಿಸಿದನು. ಈ 'ಹೊಸತನ' ಆತನ ಮಗ ಆರನೇಯ ವಿಕ್ರಮಾದಿತ್ಯನ ಕಾಲದಲ್ಲಿ ಅಧಿಕಾರ ಮತ್ತು ವೈಭವದ ಪರಾಕಾಷ್ಠೆಯನ್ನು

ತಲುಪಿ ಕಲ್ಯಾಣದ ಚಾಳುಕ್ಯರ ಕೀರ್ತಿ ಇಮ್ಮಡಿಯಾಯಿತು. ರಾಜರ ಬಿರುದುಗಳನ್ನು ನೋಡಿದರೆ ಅವರಲ್ಲಿ ಬಹುಪಾಲ ವಿದ್ಯಾವಂತರೂ, ಶೂರರು ಆಗಿದ್ದರೆಂದು ತಿಳಿಯುತ್ತವೆ. ಈತನ ಬಾಲ್ಯವನ್ನು ಬಿಲ್ಹಣ ತನ್ನ ಕೃತಿಯಲ್ಲಿ ಕಾವ್ಯೋಚಿತವಾಗಿ ವರ್ಣಿಸಿದ್ದಾನೆ. ಶಸ್ತ್ರ–ಶಾಸ್ತ್ರ ಪ್ರವೀಣನಾಗಿದ್ದ ಈತ ಮೂರು ಲೋಕಗಳಲ್ಲಿ ಅತ್ಯಧಿಕ ಬಲಶಾಲಿಯಾಗಿ ಮೆರೆಯುತ್ತಿದ್ದುದರಿಂದ ಆತನನ್ನು 'ತ್ರೈಲೋಕ್ಯಮಲ್ಲ' ಎಂಬ ಬಿರುದಿನಿಂದ ಕರೆಯುತ್ತಿದ್ದರು.[೩೨] ಅವನ ಸದಾಚಾರವು ಕವೀಂದ್ರರಿಗೆ ಪ್ರಿಯವಾಗಿತ್ತು[೩೩] ಎಂದಿದ್ದಾನೆ. ರಾಜಕುಮಾರರ ವಿದ್ಯಾಭ್ಯಾಸದ ಒಂದೆರಡು ಅಂಶಗಳು ಶಾಸನಗಳಲ್ಲಿ ದೊರಕುತ್ತವೆ. ಕ್ಷತ್ರೀಯರು ಮುಖ್ಯವಾಗಿ ಯುದ್ಧ ಮತ್ತು ಆಡಳಿತಕ್ಕೆ ಸಂಬಂಧಿಸಿದ ವಿದ್ಯೆಗಳಿಗೆ ಹೆಚ್ಚು ಗಮನಕೊಡುತ್ತಿದ್ದರು.[೩೪] ಬಿಲ್ಹಣ ತನ್ನ ಕೃತಿಯಲ್ಲಿ, ಒಂದನೆಯ ಸೋಮೇಶ್ವರನು ವೇದ, ಆಗಮ ಮತ್ತು ಇತಿಹಾಸದಲ್ಲಿ ಪಂಡಿತನಾಗಿದ್ದು, ಗುರುಗಳ ಬಗೆಗೆ ಅಪಾರ ಗೌರವವನ್ನು ಹೊಂದಿದ್ದನು.

ಈತನು ಚಾಲುಕ್ಯ ಅರಸರಲ್ಲಿ ಪ್ರಸಿದ್ಧನಾಗಿದ್ದು ಈತನಿಗೆ 'ರಾಜ ನಾರಾಯಣ' ಹಾಗೂ 'ವೀರಮಾರ್ತಾಂಡ[೩೫] ಹಾಗೂ xxx ನಾಟಕ ಭರತ ಕಲಾನಿಪುಣ' ಎಂಬ ಬಿರುದು ಸೊರಬ ತಾಲ್ಲೂಕಿನ ಒಂದು ಶಾಸನದಲ್ಲಿದೆ.[೩೬] ೬೪ ಕಲೆಗಳಲ್ಲಿ ಪರಿಪೂರ್ಣತೆ ಹೊಂದಲು ನೃತ್ಯದಲ್ಲಿ ಪರಣತಿ ಹೊಂದುವುದು ಅಂದರೆ ಭರತನಾಟ್ಯ ಶಾಸ್ತ್ರದಲ್ಲಿ ಪಾರಂಗತರಾಗುವುದು ಅನಿವಾರ್ಯವಾಗಿತ್ತು ಎಂದು ಶಾಸನವು ಸೂಚಿಸುತ್ತದೆ ಎಂಬುದು ಹೇಮಾ ಗೋವಿಂದರಾಜು ಅವರ ಅಭಿಪ್ರಾಯ.[೩೭] ಈತನ ಬಿರುದಾದ 'ರಾಜ ನಾರಾಯಣ ಎಂದರೆ ರಾಜರಲ್ಲಿ ವಿಷ್ಣುವಿನ ಅವತಾರ ಅಥವಾ ವಿಷ್ಣುವಿನಂತಿರುವವನು ಎಂದು ಗೊತ್ತಾಗುತ್ತದೆ. "ವೀರಮಾರ್ತಾಂಡ" ಎಂದರೆ ವೀರರಲ್ಲಿ ಸೂರ್ಯನಂತೆ ಹೊಳೆಯುವವನು ಎಂದು ತಿಳಿಯಬಹುದು. ಕ್ರಿ.ಶ. ೧೦೫೩ರ ಅಸುಂಡಿ ಶಾಸನದಲ್ಲಿ[೩೮] ಒಂದನೇ ಸೋಮೇಶ್ವರನ ಬಿರುದುಗಳಾದ ಸಮಸ್ತ ಭುವನಾಶ್ರಯ, ಸತ್ಯಾಶ್ರಯ ಕುಲತಿಲಕ, ತ್ರೈಲೋಕ್ಯಮಲ್ಲದೇವ ಎಂಬ ಉಲ್ಲೇಖಗಳಿವೆ. ಅಲ್ಲದೆ ಎಲಿಶಿರೂರು,[೩೯] ಮುಳಗುಂದ,[೪೦] ಕರಮುಡಿ,[೪೧] ಸೂಡಿ,[೪೨] ಆಲೂರ,[೪೩] ಕೊರಲಹಳ್ಳಿ,[೪೪] ತಾಮ್ರಗುಂಡಿ[೪೫] ಮತ್ತು ಶಿರೂರ[೪೬] ಶಾಸನಗಳು ಒಂದನೇ ಸೋಮೇಶ್ವರನ ಆಡಳಿತವನ್ನು ಸ್ಪಷ್ಟಪಡಿಸುತ್ತವೆ.

ಒಂದನೆಯ ಸೋಮೇಶ್ವರನು ಯುವರಾಜನಾಗಿರುವಾಗಲೇ ಸಾಂಪ್ರದಾಯಿಕವಾಗಿ ತನ್ನ ಪೂರ್ವಜರು ಧರಿಸಿದ್ದ ಎಲ್ಲ ಬಿರುದುಗಳನ್ನು ಧರಿಸಿಕೊಂಡಿದ್ದನೆಂದು ತಿಳಿದುಬರುತ್ತದೆ. ಕ್ರಿ.ಶ. ೧೦೩೩ರ ಶಿವಪುರದ ಶಾಸನದಲ್ಲಿ[೪೭] ಮೊದಲು ಉಲ್ಲೇಖ ಮಾಡಿದ ಎಲ್ಲ ಸಾಂಪ್ರದಾಯಿಕ ಬಿರುದುಗಳನ್ನು ಒಂದನೆಯ ಸೋಮೇಶ್ವರನು ಹೊಂದಿದ್ದನು. ಈತನು ತನ್ನ ತಂದೆಯ ಮರಣದ ನಂತರ ಕ್ರಿ.ಶ. ೧೦೪೨ರಲ್ಲಿ ಚಕ್ರವರ್ತಿಯಾಗಿ ಪಟ್ಟಕ್ಕೆ ಬಂದುದನ್ನು ಮುಳಗುಂದ[೪೮]

ಹಾಗೂ ಎಲಿಶಿರೂರು ಶಾಸನಗಳು" ಶ್ರೀ ಮತ್ರೈಲೋಕ್ಯ ಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾಚಂದ್ರರ್ಕತಾರಂಬರಂ ಸಲುತ್ತಮಿರೆ" ಎಂದು ಸ್ಪಷ್ಟವಾಗಿ ಹೇಳಿವೆ.

ಸೋಮೇಶ್ವರ ತನ್ನ ಆಳ್ವಿಕೆಯ ಕಾಲದ ಬಹುಭಾಗವನ್ನು ಚೋಳರೊಡನೆ ಕದನಗಳಲ್ಲಿ ಕಳೆದರು. ೧೦೫೧ರಲ್ಲಿ ಪಾರಮಾರ ವಂಶದ ಭೋಜನ ಮೇಲೆ ಎರಗಿ ಧಾರಾನಗರವನ್ನು ಸುಟ್ಟು ಮಾಂಡವದ ಕೋಟೆಯನ್ನು ವಶಪಡಿಸಿಕೊಂಡ. ಇನ್ನೊಂದು ಬಾರಿ ಭೋಜ ಇವನ ಮೇಲೇರಿ ಬಂದಾಗ ಸೋಮೇಶ್ವರ ಅವನನ್ನು ಚಾಳುಕ್ಯ ಮನೆತನದ ಭೀಮ ಮತ್ತು ಕಳಚೂರಿ ಕರ್ಣರೊಡಗೂಡಿ ಕದನದಲ್ಲಿ ಎದುರಿಸಿದ. ಈ ಕದನದಲ್ಲಿ ಭೋಜ ಹತನಾದಂತೆ ತೋರುತ್ತದೆ. ಹೀಗೆ ಒಂದನೇ ಸೋಮೇಶ್ವರನು ಕಲ್ಯಾಣ ಸಾಮ್ರಾಜ್ಯವನ್ನು ವಿಸ್ತರಿಸಿ ರಕ್ಷಿಸಿದನು.

ತಂದೆ ಚಕ್ರವರ್ತಿಯಾಗಿದ್ದಾಗ ಬೆಳ್ವೊಲ-೩೦೦ ಮತ್ತು ಪುಲಿಗೆರೆ-೩೦೦ಗಳನ್ನು ಮಹಾಮಂಡಳೇಶ್ವರನಾಗಿ ಸುಖ ಸಂಕಥಾವಿನೋದದಿಂದ ಆಳುತ್ತಿದ್ದನು. ಈತನನ್ನು ವೆಂಗಿಪುರವೇಶ್ವರ; ಸಮರ ಪ್ರಚಂಡ, ಕುಮಾರ ಮಾರ್ತಾಂಡ, ಪರಿಕರಿಮದ ನಿವಾರಣ, ಅಮ್ಮನ ಗಂಧವಾರಣ, ಪರಿವಾರ ನಿಧಾನ, ದಾನಕಾನೀನ, ಹಯವತ್ಸರಾಜ, ರೂಪ ಮನೋಜ, ರಿಪುನೃಪತಿಹೃದಯಶಲ್ಯ, ಭುವನೈಕ್ಯಮಲ್ಲ, ಮಾಂಡಲಿಕ ಶಿರೋಮಣಿ, ಚಾಲುಕ್ಯ ಚೂಡಾಮಣಿ, ವಿದ್ವಿಷ್ಟ ಸಂಹಾರ, ಕಟಕ ಪ್ರಕಾರ ಎಂಬ ಬಿರುದುಗಳಿಂದ ಹೊಗಳಲಾಗಿದೆ. ಈತನು ಶ್ರೀಮತ್ರೈಲೋಕ್ಯ ಮಲ್ಲದೇವನ ಪಾದಪಂಕಜ ಭ್ರಮರನೆನಿಸಿದ್ದನು.

'ವೆಂಗಿಪುರವೇಶ್ವರ' ಅಥವಾ 'ವೆಂಗಿಪುರಾವಧೀಶ್ವರ' ಎಂಬ ಬಿರುದನ್ನು ಗಮನಿಸಿದರೆ ಒಂದನೇ ಸೋಮೇಶ್ವರನು ವೆಂಗಿಯ ಮೇಲೆ ಅಧಿಕಾರ ಹೊಂದಿದ್ದನೆಂದು ಸ್ಪಷ್ಟಪಡಿಸುತ್ತವೆ. 'ಸಮರ ಪ್ರಚಂಡ'ನೆಂದರೆ ಯುದ್ಧದಲ್ಲಿ ಪರಾಕ್ರಮಿಯಾಗಿದ್ದನೆಂದು ಅಥವಾ ಪ್ರಸಿದ್ಧನಾದವನು ಎಂದು ಈ ಬಿರುದಿನಿಂದ ತಿಳಿದುಕೊಳ್ಳಬಹುದು. 'ಕುಮಾರ ಮಾರ್ತಾಂಡನೆಂದರೆ ಯುವರಾಜರಲ್ಲಿಯೇ ಸೂರ್ಯನಂತೆ ಹೊಳೆಯುವವನು', 'ಪರಿಕರಿಮದ ನಿವಾರಣ'ನೆಂದರೆ ಆನೆಯ ಮದವನ್ನು ಅಥವಾ ಸೊಕ್ಕನ್ನು ಅಡಗಿಸುವವನು, 'ದಾನಕಾನೀನನೆಂದರೆ' ಆನೆಯ ಮದೋದಕನಾಗಿರುವವನು ಅಥವಾ ಕನ್ಯಾಪುತ್ರನೆಂದು ಊಹಿಸಬಹುದು. 'ಹಯವತ್ಸರಾಜ' ಕುದುರೆಯನ್ನು ಹೊಂದಿರುವವನು, ಪರಿವಾರ ನಿಧಾನವೆಂದರೆ ತಂಡದ ನಿರ್ಧಾರ ತೆಗೆದುಕೊಳ್ಳುವವನು. ತಂಡದ ದೃಢಸಂಕಲ್ಪ ಹೊಂದಿದ್ದವನು. 'ರೂಪ ಮನೋಜ' ಎಂದರೆ ಸುಂದರವಾದ ಮನಸಿಜನೆಂದು, ಮಾಂಡಲಿಕ ಶಿರೋಮಣಿಯೆಂದರೆ ಸಾಮಂತರಲ್ಲಿಯೇ ಉತ್ತಮನಾದವನು, ಚಾಲುಕ್ಯ ಚೂಡಾಮಣಿ ಚಾಲುಕ್ಯರಲ್ಲಿಯೇ ಶ್ರೇಷ್ಠನಾದವನು, ವಿದ್ವಿಷ್ಟ ಸಂಹಾರ ಪ್ರತಿಸ್ಪರ್ಧಿಗಳನ್ನು ನಾಶ ಮಾಡುವವನು.

## ಎರಡನೇ ಸೋಮೇಶ್ವರ (ಕ್ರಿ.ಶ. ೧೦೬೮-೧೦೭೬)

ಒಂದನೇ ಸೋಮೇಶ್ವರನ ಮರಣದ ನಂತರ ಇವನ ಮಗ ಎರಡನೆಯ ಸೋಮೇಶ್ವರನು ಅಧಿಕಾರಕ್ಕೆ ಬಂದನು. ಇವನು ಪಟ್ಟಕ್ಕೆ ಬರುತ್ತಿದ್ದಂತೆಯೇ ಇವನ ಮೇಲೆ ದಾಳಿ ಮಾಡಿದ ಚೋಳ ವೀರರಾಜೇಂದ್ರನನ್ನು ಸೋಲಿಸಿದ. ಆದರೆ ಅನಂತರ ಉತ್ತರದಲ್ಲಿ ಪಾರಮಾರ ಉದಯಾದಿತ್ಯನಿಂದ ಪರಾಜಿತನಾದ. ಈ ಮೊದಲು ಈತ ತನ್ನ ತಂದೆಯ ಕಾಲಕ್ಕೆ ಬೆಳ್ವಲ-೩೦೦ ಮತ್ತು ಪುಲಿಗೆರೆ-೩೦೦ಸರಲ್ಲಿ ಎರಡನೂರರ ಕಂಪಣ ಪ್ರದೇಶವನ್ನು ಯುವರಾಜನಾಗಿ, ಮಹಾಮಾಂಡಳಿಕನಾಗಿ ಆಳಿದ ಉಲ್ಲೇಖ ಇತ್ತೀಚೆಗೆ ದೊರೆತ ಕ್ರಿ.ಶ. ೧೦೫೩ರ ಮುಳಗುಂದ ಶಾಸನದಲ್ಲಿ ಬಂದಿದೆ.[೩೦] ಇವನು 'ಭುವನೈಕಮಲ್ಲ' ಎಂಬ ಬಿರುದನ್ನು ಧರಿಸಿದ್ದನು. ಅಷ್ಟೇ ಅಲ್ಲದೆ ಈತನಿಗೂ ಕೂಡಾ 'ಸಮರ ಪ್ರಚಂಡ, ಕಮಠ ಮಾರ್ತಾಂಡ, ಪರಕರಿಮದನಿವಾರಣ, ಪರಿವಾರ ನಿಧಾನ, ದಾನ ಕಾನೀನ, ಹಯವತ್ಸರಾಜ, ರೂಪಮನೋಜರಿಪುಹಯಸೆಲ್ಲ ಮಾಂಡಲಿಕ ಶಿಖಾಮಣಿ' ಎಂಬ ಬಿರುದುಗಳಿದ್ದವೆಂದು ಮುಳಗುಂದ ಶಾಸನ ಹಾಗೂ ಎಲಿಶಿರೂರು[೩೧] ಶಾಸನದಲ್ಲಿ ಹೇಳಿದೆ. ಈತನು ಜಗತ್ತಿನಲ್ಲಿ ಬಹಳ ಶೂರನಾದವನು ಅಥವಾ ಲೋಕೈಕವೀರ ಎಂದು 'ಭುವನೈಕ್ಯಮಲ್ಲ' ಎಂಬ ಬಿರುದಿನಿಂದ ತಿಳಿಯಬಹುದು. ಒಂದನೇ ಸೋಮೇಶ್ವರ ಹೊಂದಿದ ಎಲ್ಲ ಬಿರುದುಗಳನ್ನು ಎರಡನೇ ಸೋಮೇಶ್ವರನು ಧರಿಸಿದ್ದಾನೆ. 'ಮಾಂಡಲಿಕ ಶಿಖಾಮಣಿ' ಮಾಂಡಲಿಕರಲ್ಲಿಯೇ ಶ್ರೇಷ್ಠವ್ಯಕ್ತಿ ಎಂದು ಆತನನ್ನು ಅರ್ಥೈಸಬಹುದು.

ಎರಡನೆಯ ಸೋಮೇಶ್ವರನು ಉನ್ನತ ಬಿರುದಾಂಕಿತನಾಗಿದ್ದರೂ ಧಾರ್ಮಿಕ ಕಾರ್ಯಕಲಾಪಗಳಿಗೆ ಉದಾರ ದಾನ ಮಾಡಿದ್ದರೂ 'ತನ್ನ ತಮ್ಮಂದಿರೊಡನೆ ಕಲಹ ಮಾಡಿದ್ದಲ್ಲದೆ ಪ್ರಜೆಗಳಿಗೆ ತೊಂದರೆ ಕೊಟ್ಟು ಬಹಳ ಅಪ್ರಿಯನಾಗಿದ್ದನೆಂದು' ಹೇಳಲಾಗುತ್ತದೆ.[೩೨] ನಯಸೇನನ ಧರ್ಮಾಮೃತದಲ್ಲಿಯ ಲಲಿತಾಂಗನ ವಿಕೃತ ಚಿತ್ರ ಈ ಎರಡನೆಯ ಸೋಮೇಶ್ವರನ ಪಾತ್ರವೇ ಆಗಿದೆಯೆಂದು ರಂ.ಶ್ರೀ. ಮುಗುಳಿಯವರು ಅಭಿಪ್ರಾಯಪಟ್ಟಿದ್ದಾರೆ.[೩೩] ಅರಸನು ಕ್ರೂರನಾದರೆ ಲೋಕವೆಲ್ಲ ಕೆಟ್ಟು ಹೋಗುತ್ತದೆ. ಪದೇ ಪದೇ ಅರಸನನ್ನು ಬದಲಿಸುತ್ತ ಹೋದರೂ ನಾಡು ಹಾಳಾಗುತ್ತದೆ ಎಂಬ ತಿಳುವಳಿಕೆ ಅಂದಿನ ಜನರಲ್ಲಿತ್ತು.[೩೪] ಎರಡನೇ ಸೋಮೇಶ್ವರನು ಅಷ್ಟೊಂದು ದಕ್ಷ ಆಡಳಿತಗಾರನಾಗಿರಲಿಲ್ಲವೆಂದು ಈ ಮೇಲಿನ ಅಂಶಗಳಿಂದ ಸ್ಪಷ್ಟವಾಗುತ್ತದೆ. ಕೇವಲ ನಾಲ್ಕು ವರ್ಷಗಳ ಅಧಿಕಾರಾವಧಿಯಲ್ಲಿ ಈತನ ಕಿಡಿಗೇಡಿತನ, ದುರಾಡಳಿತ ಅತಿಯಾಗಿ ಚಾಲುಕ್ಯ ಸಾಮ್ರಾಜ್ಯದ ಘನತೆ ಅಧಃಪತನಕ್ಕಿಳಿಯತೊಡಗಿತು.

ತನ್ನ ಆಳ್ವಿಕೆಯ ಕೊನೆಯ ದಿನಗಳಲ್ಲಿ ಚಾಲುಕ್ಯ ವೈರಿಗಳಾಗಿದ್ದ ಚೋಳರೊಡನೆ ಸ್ನೇಹ ಬೆಳಸಿದ್ದು ಚಾಲುಕ್ಯರ ಆಸಕ್ತಿಯ ಕ್ಷೇತ್ರವಾಗಿದ್ದ ವೆಂಗಿದೇಶ ಚೋಳರ ವಶವಾಗಲು ಅವಕಾಶ ಮಾಡಿಕೊಟ್ಟದ್ದು ಮೊದಲಾದ ಘಟನೆಗಳು ನಡೆದವು. ಅಲ್ಲದೆ ಒಂದನೇ ಸೋಮೇಶ್ವರನ

ಕಾಲದಿಂದಲೂ ಪ್ರಭಾವಿಯಾಗಿದ್ದ ಇವನ ತಮ್ಮ ಆರನೇ ವಿಕ್ರಮಾದಿತ್ಯನನ್ನು ಸಂಶಯ ದೃಷ್ಟಿಯಿಂದ ನೋಡುತ್ತಿದ್ದುದರಿಂದ ಇವರಲ್ಲಿ ವಿರಸ ಮೂಡಿತು.

ಈ ಪರಿಸ್ಥಿತಿಯಲ್ಲಿ ವಿಕ್ರಮಾದಿತ್ಯ ಅಣ್ಣನನ್ನು ಸಿಂಹಾಸನದಿಂದ ಹೊರದೂಡಿ ಒತ್ತಾಯ ಪೂರ್ವಕವಾಗಿ ಸಾಮ್ರಾಜ್ಯವನ್ನು ಕಿತ್ತುಕೊಂಡು, ಅದರ ನೇತೃತ್ವವನ್ನು ವಹಿಸಿಕೊಂಡ. ಹೀಗೆ ಎರಡನೆ ಸೋಮೇಶ್ವರನ ಅಲ್ಪಾವಧಿಯ ಆಡಳಿತವು ಕೊನೆಗೊಂಡಿತು.

### ಆರನೆಯ ವಿಕ್ರಮಾದಿತ್ಯ (ಕ್ರಿ.ಶ. ೧೦೭೬-೧೧೨೬)

ಆರನೆಯ ವಿಕ್ರಮಾದಿತ್ಯನು ಕ್ರಿ.ಶ. ೧೦೭೬ರಲ್ಲಿ ಅಧಿಕಾರಕ್ಕೆ ಬಂದನು. ಚಾಲುಕ್ಯರಲ್ಲಿಯೇ ಅತ್ಯಂತ ಪ್ರಸಿದ್ಧನು. ದಕ್ಷ ಆಡಳಿತಗಾರನೂ, ಮಹಾವಿಜೇತನೂ, ಸಾಹಿತ್ಯ-ವಿದ್ಯೆ ಹಾಗೂ ಕಲಾಪೋಷಕನು ಆಗಿದ್ದನು. ಈ ಪ್ರಖ್ಯಾತ ಕಲ್ಯಾಣ ಚಾಲುಕ್ಯ ಸಾಮ್ರಾಟನು ತನ್ನ ಸಿಂಹಾಸನವೇರಿದ ವರ್ಷದಲ್ಲಿಯೇ ಒಂದು ನೂತನ ಶಕವರ್ಷ ಪ್ರಾರಂಭ ಮಾಡಿ ತನ್ನ ಆಳ್ವಿಕೆಯನ್ನು ಸಂವತ್ಸರದಿಂದಲೇ ಕಾಲಗಣನೆಯನ್ನು ಪ್ರಾರಂಭಿಸಿ 'ತ್ರಿಭುವನಮಲ್ಲ', 'ವಿಕ್ರಮಾಂಕ' ಎಂಬ ಬಿರುದುಗಳನ್ನು ಧರಿಸಿದನು. ಈತನು ಯುವರಾಜನಾಗಿ ಹಾಗೂ ಚಕ್ರವರ್ತಿಯಾಗಿ ಅನೇಕ ಬಿರುದುಗಳನ್ನು ಧರಿಸಿ ಆಡಳಿತ ನಿರ್ವಹಿಸಿದ್ದಾನೆ. ಶಾಸನಗಳಲ್ಲಿ ಈತನನ್ನು ಅನೇಕ ರೀತಿಯ ಪ್ರಶಸ್ತಿಗಳಿಂದ ವರ್ಣಿಸಿದ್ದಾರೆ. ಇವನು ಕೂಡ ವಂಶಪಾರಂಪರ್ಯವಾಗಿ ಬಂದ ಪ್ರಶಸ್ತಿಗಳನ್ನು ಧರಿಸಿದ್ದಾನೆ.

ವಿಕ್ರಮಾದಿತ್ಯನು ಕುಮಾರ ವೃತ್ತಿಯಿಂದ ಆಳುತ್ತಿರುವಾಗಲೇ ಗಂಗರ[೫೫] ಎಲ್ಲ ಪ್ರಶಸ್ತಿಗಳನ್ನು ಧರಿಸಿದ್ದಾನೆ. ಕ್ರಿ.ಶ. ೧೦೫೫ ಡಿಸೆಂಬರ್ ೨೫ರ ಶಿಗ್ಗಾವಿ ಶಾಸನದಲ್ಲಿ "ಸ್ವಸ್ತಿ ಸಮಸ್ತ ನ್ರಿಪಜನ ಸ್ತುತ್ಸ ಸತ್ಯವಾಕ್ಯ ಕೊಂಗುಣಿವರ್ಮ್ಮಧರ್ಮ್ಮ ಮಹಾರಾಜಾಧಿರಾಜಂ ಪರಮೇಶ್ವರ ಕುವರಾಳ ಪುರವರೇಶ್ವರ ನಂದ ಗಿರಿನಾಥಂ ಮದಗಜೇಂದ್ರಲಾಂಚನಂ ಪದ್ಮಾವತೀಲಬ್ಧ ವರಪ್ರಸಾದಂ ಗಂಗ ಕುಸುಮಾಯುಧಂ ನನ್ನಿಯುಗಂಗಂ ಜಯದುತ್ತರಂಗಂ ವಿಬುಧಜನಚಿನ್ತಾಮಣಿ ಮಣ್ಣಳಿಕಮಕುಟ ಚೂಡಾಮಣಿ ಶ್ರೀಮಚ್ಚಾಳುಕ್ಯ ಗಂಗ ಪೆರ್ಮ್ಮಾನಡಿ ವಿಕ್ರಮಾದಿತ್ಯದೇವರ್" ಎಂದು ಹೇಳಲಾಗಿದೆ. ಇವು ಗಂಗರನ್ನು ಗೆದ್ದು ತೆಗೆದುಕೊಂಡಿರುವ ಬಿರುದುಗಳಾಗಿವೆ. ಇದೇ ರೀತಿ ಕಲ್ಕೇರಿ,[೫೬] ಅಡಗಂಟಿ,[೫೭] ಶಾಸನಗಳಲ್ಲೂ ಪ್ರಶಸ್ತಿ ಬರುತ್ತದೆ.

ಚಕ್ರವರ್ತಿಯಾದ ಬಳಿಕ ಈ ವಂಶದ ಪ್ರತಿಯೊಬ್ಬರಿಗೂ ಪಾರಂಪರ್ಯವಾಗಿ ಬರುತ್ತಿದ್ದ ಪ್ರಶಸ್ತಿಯನ್ನೇ ಈತನೂ ಧರಿಸಿದ್ದಾನೆ. ಈತನ ಪ್ರಶಸ್ತಿಯನ್ನು ಶಾಸನಗಳು "ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜೆಯರಾಜ್ಯ ಮುತ್ತರೋತ್ತರಾಭಿವ್ರಿದ್ಧಿ ಪ್ರವರ್ಧಮಾನಮಾಚಂದ್ರಾರ್ಕ

ತಾರಂಬರಂ ಸಲುತ್ತಮಿರೆ"[೫೭] ಎಂದು ಹೇಳುತ್ತವೆ. ಶಾಸನಗಳು 'ತ್ರಿಭುವನಮಲ್ಲ' ಎಂದೂ ಕೆಲವೊಮ್ಮೆ 'ಪೆರ್ಮಾಡಿ'ಯೆಂದೂ ಒಮ್ಮೆ 'ರಾಯನಾರಾಯಣ'ನೆಂದು ಮತ್ತೊಮ್ಮೆ 'ರಾಯಸರ್ವಜ್ಞ'ನೆಂದೂ ಕರೆದಿವೆ. ದಿಗ್ಗಾವ ಶಾಸನವು[೫೮] ಶ್ರೀಮದ್ರಾಯಸರ್ವಜ್ಞನೆಂದು ಕರೆದರೆ, ಅಂಬಳಿ ಶಾಸನವು[೫೯] 'ಭುವನೈಕ್ಯಮಲ್ಲನನುಜಂ ಚಾಳುಕ್ಯನಾರಾಯಣ' ಎಂದು ಕರೆದಿದೆ. ತ್ರಿಪ್ರರಾಂತಕಂ ಶಾಸನವು[೬೦] ಮಾತ್ರ ಈತನ ಪ್ರಶಸ್ತಿಯನ್ನು ಭಿನ್ನ ರೂಪದಲ್ಲಿ ಹೀಗೆ ಹೇಳಿದೆ. 'ಸತ್ಯಾಶ್ರಯ ಕುಳತಿಳಕ ನರಪಾಳ ಭಯಂಕರ ರಾಜಗಜಕೇಸರೀ' ಸಾಮಂತ್ತಹರಿಣ ಶಾರ್ದೂಲ ಪಾಂಡ್ಯತೂಲಚಂಡಮಾರುತ xxx ಕಾಳಿಯ ಗೋಪಾಳ ಕುಂತ್ತಳ ಸೇನಾಕೃತಾಂತ್ತಯಾದವಬಲ ಚಲಧಿವಡಬಾನಲ ಕೊಂಕಣರಣಾಂಕ್ಕಣಭಯಂಕರ ಸೇವಣರಣ ಭೀಸಣ ಸಪ್ತಮಾಳ ವಸಪ್ತಾರ್ಚಿಮ ಸಿಂಧುವಾನಕಂದ್ದಕುಂದ್ದಾಳ ಪಲ್ಲಿಕೋಟ ನ(ಲ್ಲೂರ)ತನ ಭದ್ರಾಂಗ್ಗ ವಿದ್ರಾವಣಚಟ್ಟತವಾನ ಅಯ್ಯನಯ್ಯ ಫಣೀಂದ್ರ ಸೌಪರ್ಣ(ವು)ರ್ಗ್ಗರಕರಾಕಸ ರಾಷ್ಟ್ರ ಕಾಲದಂಡ ಪಾಂಚಾಳಹರಿಣ ಪಂಚಾನನ ವಿದರ್ಭವನಿತಾ ವಿದ್ವಾಂಸರ ಕಳಿಂಗ್ಗ ಸ್ಫುಳಿಂಗ್ಗಧಾರಾಧರ ಚಾಳುಕ್ಯಾಭರಣ ಶ್ರೀಮತ್ರಿಭುವನ ಮಲ್ಲದೇವರ ವಿಜಯರಾಜ್ಯ ಮತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಂ ಜಯನ್ತೀಪುರದ ನೆಲೆವೀಡಿನೊಳು ರಾಜ್ಯಗೆಯ್ಯುತ್ತಿದ್ದುದು" ತಿಳಿದುಬರುತ್ತದೆ. ಕೋನೂರು ಶಾಸನದಲ್ಲಿ[೬೧] "ಸ್ವಸ್ತಿ ತ್ರೈಭುವನಾಶ್ರಯಂ ಪೃಥುಧರಾಶ್ರೀವಲ್ಲಭಂ ಶೂಕರನ್ಯಸ್ತೇದ್ವಧ್ವಜಲಾಂಚ್ಚನಂನುತ ಮಹಾರಾಜಾಧಿರಾಜಂ ಯಶೋವಿಸ್ತಾರಂ ಪರಮೇಶ್ವರಾಂಕ ಪರಮಂ ಭಟ್ಟಾರಂಕ ಶಾತ್ರಪೋನ್ಮಸ್ತನಸ್ತ ಪದಾಬ್ಬಿನೂರ್ಜ್ಜಿತಯಶಂ ಚಾಳುಕ್ಯ ಕಣ್ಠೀರಮಂ" ಎಂದಿದೆ. ಚಿಬ್ರೋಲು ಶಾಸನದಿಂದ[೬೨] 'ರಾಯದೇವೇಂದ್ರ' ಎಂಬ ಬಿರುದೂ ಇದ್ದುದು ತಿಳಿದುಬರುತ್ತದೆ.

ಕುರ್ತಕೋಟಿ,[೬೩] ಹೊಸೂರು,[೬೪] ಮುಳಗುಂದ,[೬೫] ಎಲಿಶಿರೂರು,[೬೬] ಶಾಸನಗಳಲ್ಲಿ ಆರನೆಯ ವಿಕ್ರಮಾದಿತ್ಯನ ಬಿರುದುಗಳನ್ನು ಬಣ್ಣಿಸಲಾಗಿದೆ. ಈ ಶಾಸನಗಳಲ್ಲಿ ಈ ವಂಶದ ಪೂರ್ವಜರಿಗಿದ್ದ ಬಿರುದುಗಳನ್ನು ಈತನಿಗೂ ಕೀರ್ತಿಸಲಾಗಿದೆ. ಕ್ರಿ.ಶ. ೧೦೭೬ರಲ್ಲಿ ಅಧಿಕಾರ ಸೂತ್ರ ಹಿಡಿದ ಈತನು ರಾಜ್ಯದ ಉತ್ತರೋತ್ತರ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದನೆಂದು ಈ ಎಲ್ಲಾ ಶಾಸನಗಳಿಂದ ಖಚಿತವಾಗುತ್ತಿದೆ.

ಕ್ರಿ.ಶ. ೧೦೮೭ರ ಕಾಲದ ಕುರ್ತುಕೋಟಿ ಶಾಸನದಲ್ಲಿ ವಿಕ್ರಮಾದಿತ್ಯನನ್ನು

"ಮಕರಕರವಿಹತ ಭೀಕರ
ಮಕರಾಕರವಳೆಯೆವಳಯಿತೋರ್ವೀತಳಮಂ
ಸಕಳರಿಮನೃಪ ಭಯಂಕರ
ನಕಳಂಕಂವಿಕ್ರಮಾಂಕನಾಳುತ್ತಮಿರಲ್" (ಸಾಲು ೪–೫)

ಎಂದು ಬಣ್ಣಿಸಿದೆ. ಸಮುದ್ರ ಸುತ್ತುವರಿಯಲ್ಪಟ್ಟ ಭೂಮಂಡಲವನ್ನು ಅಪಾರ ಸೈನ್ಯವನ್ನೊಳಗೊಂಡು, ವೈರಿಯರಸರಿಗೆ ಭಯಂಕರನಾದ ಅಕಳಂಕ ವಿಕ್ರಮಾಧಿತ್ಯನು ಆಳುತ್ತಿದ್ದನೆಂಬುದು ಇಲ್ಲಿ ಸ್ಪಷ್ಟವಿದೆ. ಕುರ್ತುಕೋಟಿಯ ಇನ್ನೊಂದು ಶಾಸನ "ವಿಕ್ರಮಾದಿತ್ಯ ಹಿಮಾಲಯ ಪರ್ವತದವರೆಗಿನ ಭೂಮಂಡಲದಲ್ಲಿ ಪ್ರಸಿದ್ಧನಾಗಿದ್ದನು." ಹತ್ತು ದಿಕ್ಕಿನ ಕ್ಷತ್ರೀಯರನ್ನು ಸ್ವಸಾಮರ್ಥ್ಯದಿಂದ ಸೋಲಿಸಿ ಪರಾಕ್ರಮಿಯೆನಿಸಿದ್ದನು. ವೈರಿಯರಸರು ತಾವು ಗಳಿಸಿದ ಒಡವೆಗಳನ್ನು ವಿಕ್ರಮಾದಿತ್ಯನಿಗೆ ಅರ್ಪಿಸಿ ಅವನ ಅಡಿಗೆರಗಿ ಶರಣಾಗತರಾಗಿ ಬಾಳುತ್ತಿದ್ದರು. ಅವನನ್ನು ಸಿಟ್ಟಿಗೇಳಿಸಿ ವಿರೋಧಿಸಿದ ವೈರಿಯರಸರಿಗೆ ಉಳಿಗಾಲವೇ ಇರಲಿಲ್ಲವೆಂದು[೪೮] ಹೇಳುತ್ತದೆ. ವಿಕ್ರಮಾದಿತ್ಯನ ಸಾಮರ್ಥ್ಯ, ಶೂರತ್ವವನ್ನು ಕುರಿತ ಈ ಮಾತುಗಳು ಗಮನಾರ್ಹವಾಗಿವೆ; ಇವು ಹಲವಾರು ಯುದ್ಧಗಳಲ್ಲಿ ಆತ ಪರಾಕ್ರಮವನ್ನು ಮೆರೆದುದಕ್ಕೆ ದಾಖಲೆಗಳಾಗಿವೆ.[೪೯] ಪರದೇಶಾಧಿಪರಟ್ಟಿದ ದೂತರನ್ನು, ಅವರು ತಂದ ಕಪ್ಪಕಾಣಿಕೆಗಳನ್ನು ದೊರೆಯ ಅವಗಾಹನೆಗೆ ತಂದು ಭಿನ್ನವಿಸಿಕೊಳ್ಳುವ 'ದೌವಾರಿಕರು' ಈತನ ಓಲಗದಲ್ಲಿ ಇದ್ದರೆಂದು ಧರ್ಮಾಮೃತದಿಂದ ತಿಳಿಯುತ್ತದೆ.[೫೦]

ಕಣವಿ ಶಾಸನದಲ್ಲಿ ವೃತ್ತಪದ್ಯವೊಂದರಲ್ಲಿ ವಿಕ್ರಮಾದಿತ್ಯನನ್ನು ಹೀಗೆ ಹೊಗಳಲಾಗಿದೆ.[೫೧]

"ತ್ರಿಭುವನವರ್ತಿಕೀರ್ತಿ ಸುಭಲಕ್ಷಣಲಕ್ಷಿತ ಭದ್ರಮೂರ್ತಿದೊ
ರ್ವ್ವಿಭವವಿನಿರ್ಜ್ಜಿತಾರಿ ದುರಘಬ್ರನಿಹಾರಿಯಿವಂ ದಿಟಂಜಗ
ತ್ಕಭಿನವಚಕ್ರಿಯೆಂದಭಿಜನಂ ಪೊಗಳುತ್ತಿರೆ ಮೆಚ್ಚಿಬಿಚ್ಚತಂ
ತ್ರಿಭುವನಮಲ್ಲಚಕ್ರಿ ಪರಿಪಾಳಿಸುತಿರ್ದನ ಶೇಷಧಾತ್ರಿಯಂ" (ಸಾಲು ೨-೪)

ವಿಕ್ರಮಾದಿತ್ಯನ ಕೀರ್ತಿ ಶುಭಲಕ್ಷದಿಂದ ಭದ್ರವಾಗಿದ್ದು, ಮಾದರಿಯಾಗಿದೆ; ದುಷ್ಕರ್ಮ ಮಾಡುವವರನ್ನು ಸಂಹರಿಸುವನೆಂಬ ಸತ್ಯವನ್ನು ಸ್ಥಾಪಿಸಿದ ಈತನನ್ನು 'ಜಗತ್ಯಭಿನವಚಕ್ರಿ' ಎಂದು ಹೊಗಳುತ್ತಿತ್ತು. ತನ್ನ ಕೀರ್ತಿಯನ್ನು ತಾನೇ ಮೆಚ್ಚಿ, ಲೋಕವನ್ನು ಪರಿಪಾಲಿಸುತ್ತಿದ್ದ ಅವನ ಆಡಳಿತ ವೈಖರಿ ಅನನ್ಯವಾದುದು ಎಂದು ಇಲ್ಲಿ ಹೇಳಲಾಗಿದೆ. 'ಇಂಥ ಅರಸರಿಂದಲೇ ಇಳೆಗೆ ಕಳೆ ಬರುತ್ತದೆಂದು ಅಂದಿನ ಜನತೆ ಭಾವಿಸಿದ್ದಿತು.[೫೨] ಅರಸನ ಬಹುದೊಡ್ಡ ಜವಾಬ್ದಾರಿ ಜನತೆಗೆ ರಕ್ಷಣೆಕೊಡುವದು. ವಿಕ್ರಮಾದಿತ್ಯನ ಪ್ರಭುತ್ವ ಹಿರಿಮೆಯಿಂದ ಕೂಡಿದ್ದಿತ್ತು. ಈತ ಜನತೆಯಲ್ಲಿ ಕರುಣೆಯುಳ್ಳವನಾಗಿದ್ದರಿಂದ ಶ್ರೇಷ್ಠ ದೊರೆ" ಎನಿಸಿದ್ದನು.[೫೩] ಭೂಮಿಯ ರಕ್ಷಣೆ, ದುಷ್ಟರನ್ನು ಶಿಕ್ಷಿಸುವುದು, ಸದ್ಧರ್ಮಗಳನ್ನು ಕಾಪಾಡುವುದು, ದೂರ್ತರ ಬೇರುಗಳನ್ನು ಬುಡಸಮೇತ ಕೀಳುವುದು. ಇವೇ ಮೊದಲಾದ ಪ್ರಜಾಹಿತ ಕಾರ್ಯಗಳನ್ನು ವಿಕ್ರಮಾದಿತ್ಯ ಸಮರ್ಥವಾಗಿ ಮಾಡಿದನು.[೫೪] ತಾಯಿ ಶಿಶುವನ್ನು ರಕ್ಷಿಸುವಂತೆ ರಾಜನು ಪ್ರಜೆಗಳನ್ನು ರಕ್ಷಿಸುತ್ತಿದ್ದನು. ದುಃಖಿತರ ದುಃಖದ ಕಾರಣ ತಿಳಿದು ಆಲೋಚಿಸಿ ಸಂತಸಪಡಿಸುವ ಗುಣ ವಿಕ್ರಮಾದಿತ್ಯನಿಗಿತ್ತು.[೫೫]

ಕಲ್ಯಾಣ ಚಾಲುಕ್ಯ ದೊರೆಗಳಲ್ಲಿಯೇ ಅತ್ಯಂತ ಬಲಿಷ್ಠ ಹಾಗೂ ಸುಪ್ರಸಿದ್ಧ ವೀರದೊರೆಯಾಗಿದ್ದನು. ಶಾಸನಗಳ ಸಂಖ್ಯಾದೃಷ್ಟಿಯಿಂದ ಪ್ರಪಂಚದಲ್ಲಿಯೇ ಅಧಿಕ ಶಾಸನ ಬರೆಯಿಸಿದ ಚಕ್ರವರ್ತಿ ಇವನು. ಸಾವಿರಕ್ಕೂ ಮೇಲ್ಪಟ್ಟ ಇವನ ಶಾಸನಗಳಲ್ಲಿ ಆಗಿನ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಮುಂತಾದ ವಿಷಯಗಳು ಉಲ್ಲೇಖಿತವಾಗಿವೆ. ಈತನು 'ನಿತ್ಯ ಭೂಮಿದಾನಲೋಲ' ಎಂದೂ ಕರೆಯಿಸಿಕೊಂಡಿದ್ದಾನೆ.

ವಿಕ್ರಮಾದಿತ್ಯನ ಆಡಳಿತ ನ್ಯಾಯದಿಂದ ಕೂಡಿತ್ತು.[೬೬] ರಾಜ್ಯದ ಸಮಸ್ಯೆಗಳನ್ನು ಕುರಿತು ಪ್ರಧಾನಿ ಮತ್ತು ರಾಣಿಯರ ಜೊತೆ ಚರ್ಚಿಸುತ್ತಿದ್ದನು.[೬೭] ವಿಕ್ರಮಾದಿತ್ಯನು ಶೌರ್ಯದಲ್ಲಿ ನಾರಾಯಣನಾಗಿದ್ದರೆ ವಿವಾಹದ ವಿಷಯದಲ್ಲಿ ಶ್ರೀಕೃಷ್ಣ ಪರಮಾತ್ಮನಾಗಿದ್ದಾನೆ. ಇವನಿಗೆ ೧೯ ಜನ ರಾಣಿಯರಿದ್ದರೆಂಬ ಉಲ್ಲೇಖ ಶಾಸನಗಳಲ್ಲಿ ಮತ್ತು 'ವಿಕ್ರಮಾಂಕದೇವಚರಿತಂ'ನಲ್ಲಿ ಬರುತ್ತದೆ ಹಾಗೂ ಈತನ ಬಿರುದುಗಳ ಅರ್ಥಗಳನ್ನು ಈ ಕೆಳಗಿನಂತೆ ನೋಡಬಹುದು.

'ತ್ರಿಭುವನಮಲ್ಲ' ಎಂದರೆ ಸ್ವರ್ಗ, ಮೃತ್ಯು ಮತ್ತು ಪಾತಾಳಗಳೆಂಬ ಮೂರು ಲೋಕಗಳ ಒಡೆಯನೆಂದು ತಿಳಿಯಬಹುದು. 'ವಿಕ್ರಮಾಂಕ, ಸಿಂಹದಂತೆ ಹೆಜ್ಜೆಯಿಡುವವನು' ಎಂದರ್ಥ. 'ಪೆರ್ಮಾಡಿ' ಎಂದರೆ ಹಿರಿಮೆಯನ್ನು ಹೊಂದಿರುವವನು, 'ರಾಯನಾರಾಯಣ' ಎಂದರೆ ವಿಷ್ಣುವಿನ ಅವತಾರ ಅಂದರೆ ಶೌರ್ಯದಲ್ಲಿ ನಾರಾಯಣನಂತೆ, 'ರಾಯಸರ್ವಜ್ಞನೆಂದರೆ' ಎಲ್ಲವನ್ನು ಬಲ್ಲವನು ಎಂದರ್ಥ. 'ನರಪಾಳಭಯಂಕರನೆಂದರೆ' ಅರಸರಲ್ಲಿಯೇ ಭಯವನ್ನುಂಟು ಮಾಡುವವ 'ರಾಜಕೇಸರಿ' ಎಂದರೆ ರಾಜರಲ್ಲಿಯೇ ವೀರಾಧಿವೀರ, ಅಥವಾ ನರಸಿಂಹ ಎಂದು 'ಹರಿಣಶಾರ್ದೂಲ' ಎಂದರೆ ಸಿಂಹದಂತೆ ಬಲಿಷ್ಠನಾಗಿರುವವನು, 'ರಾಯದೇವೇಂದ್ರ' ಎಂದರೆ ದೇವತೆಗಳ ಒಡೆಯ ಎಂದರ್ಥ. ಈ ರೀತಿಯಾಗಿ ಆರನೇ ವಿಕ್ರಮಾದಿತ್ಯನು ಬಿರುದುಗಳನ್ನು ಹೊಂದಿದ್ದು. ಚಾಲುಕ್ಯರಲ್ಲಿಯೇ ಅತ್ಯಂತ ದಕ್ಷ ಯೋಧನಾಗಿದ್ದನೆಂದು ಬಿರುದುಗಳಿಂದ ತಿಳಿಯಬಹುದು.

### ಮೂರನೇ ಸೋಮೇಶ್ವರ (ಕ್ರಿ.ಶ. ೧೧೨೭–೧೧೩೯)

ಆರನೆಯ ವಿಕ್ರಮಾದಿತ್ಯನ ಮಗ ಮೂರನೆಯ ಸೋಮೇಶ್ವರನು ಕ್ರಿ.ಶ. ೧೧೨೭ರಲ್ಲಿ ಪಟ್ಟಕ್ಕೆ ಬಂದನು.[೬೮] ಇವನು ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳಿದನು. ಇವನು 'ಭೂಲೋಕಮಲ್ಲ', 'ಸರ್ವಜ್ಞ ಚಕ್ರವರ್ತಿ' ಎಂಬ ಬಿರುದುಗಳನ್ನು ಧರಿಸಿದ್ದನು. ಚಕ್ರವರ್ತಿಯಾದ ನಂತರ ಈತನ ಪ್ರಶಸ್ತಿಯನ್ನು ಶಾಸನಗಳು "ಶ್ರೀ ನಮಸ್ತುಂಗ ಶಿರಶ್ಚುಂಬಿಚನ್ದ್ರ ಚಾಮರಚಾರವೇ। ತ್ರೈಲೋಕ್ಯ ನಗರಾರಂಭ (೦) ಮೂಲಸ್ತಂಭಾಯ ಶಂಭವೇ ॥ ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪೃಥ್ವಿವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರಕಂ

ಸತ್ಯಾಶ್ರಯ ಕುಳತಿಳಕಂ ಚಾಲುಕ್ಯಾಭರಣಂ ಶ್ರೀಮದ್ಭೂಲೋಕಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾ ಚಂದ್ರಾರ್ಕ್ಕತಾರಂ ಸಲುತ್ತಂ" ಎಂದು ಹೇಳುತ್ತದೆ. ಅಂದರೆ ಈತನಿಗೂ ಚಕ್ರವರ್ತಿಯಾದ ನಂತರ ಈ ವಂಶದ ಪ್ರತಿಯೊಬ್ಬರಿಗೂ ಬರುವಂತೆ ಈ ಪ್ರಶಸ್ತಿಗಳು ಪಾರಂಪರ್ಯದಿಂದ ಬಂದುದಾಗಿದೆ. ಕೆಲವು ಶಾಸನಗಳು 'ಭೂಲೋಕ ಮಲ್ಲ', 'ಸರ್ವಜ್ಞ ಚಕ್ರವರ್ತಿ' ಎಂದು ಕರೆದರೆ ಇನ್ನೂ ಕೆಲವು ಶಾಸನಗಳು 'ಸರ್ವಜ್ಞ ಚಕ್ರವರ್ತಿ ಭೂಲೋಕಮಲ್ಲ' ಎಂದು ಕರೆದಿವೆ. ನರಗುಂದ[೬೮] ಶಾಸನದಲ್ಲಿ ಮಾತ್ರ 'ಚಕ್ರಿರಾಜ ಸರ್ವಜ್ಞನ್ರಿಪ' ಎಂದು ಕರೆಯಲಾಗಿದೆ. ಅಲ್ಲದೇ ಈತನ ಕೃತಿಯಾದ ಮಾನಸೋಲ್ಲಾಸ ಅಥವಾ ಅಭಿಲಾಷಿತಾರ್ಥ ಚಿಂತಾಮಣಿ ಕೃತಿಯು[೬೯] ಐದೂ ವಿಶಂತಿಗಳ ಅಂತ್ಯದಲ್ಲಿ "ಶ್ರೀ ಮಹಾರಾಜಾಧಿರಾಜ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣ ಶ್ರೀಮದ್ಭೂಲೋಕಮಲ್ಲ ಶ್ರೀ ಸೋಮೇಶ್ವರದೇವ ವಿರಚಿತ" ಎಂದು ತನ್ನ ಪ್ರಶಸ್ತಿಯನ್ನು ಹೇಳಿಕೊಂಡಿದ್ದಾನೆ. ಆದರೆ ಈ ಸರ್ವಜ್ಞ ಚಕ್ರವರ್ತಿ ಎಂಬ ಪ್ರಶಸ್ತಿ ಈತ ಮಾನಸೋಲ್ಲಾಸ ಕೃತಿಯನ್ನು ರಚಿಸುವ ಪೂರ್ವದಲ್ಲಿಯೇ ಇತ್ತೆಂದು ಹೇಳಬಹುದು. ಏಕೆಂದರೆ ಕ್ರಿ.ಶ. ೧೧೨೫ರ ಶಾಸನದಲ್ಲಿ[೭೦] "ಶ್ರೀಮತ್ಸರ್ವಜ್ಞ ಚಕ್ರವರ್ತಿಭೂಲೋಕಮಲ್ಲದೇವರು" ಎಂದಿದೆ. ಆದರೆ ಈತನ ಮಾನಸೋಲ್ಲಾಸ ಕೃತಿ ಸಂಪೂರ್ಣವಾದುದು ಕ್ರಿ.ಶ. ೧೧೨೯ ಅಂದರೆ ಈತ ಪಟ್ಟಕ್ಕೆ ಬಂದ ಎರಡನೇ ವರ್ಷ. ಹೀಗಾಗಿ ಈತನು ತನ್ನ ವಿದ್ವತ್ತು, ಬಹುಮುಖ ಪ್ರತಿಭೆಯಿಂದ ಮಾನಸೋಲ್ಲಾಸ ರಚಿಸುವ ಪೂರ್ವದಲ್ಲಿಯೇ ಸರ್ವಜ್ಞ ಚಕ್ರವರ್ತಿ ಎನಿಸಿಕೊಂಡಿದ್ದನು. ಇದನ್ನು ಬೆಂಬಲಿಸುವ ರೀತಿಯಲ್ಲಿಯೇ "ಅಖಿಕಳಾ ಸಂಪತ್ಸನ್ನಿಧಿ ತಂನೊಳೆಸೆಯ ಸರ್ವಜ್ಞ ಮಹೀಭೃತಂಜ್ಞೆ ಪಡೆದನವಳ ಶರತ್ಸಮಯ ಸುಧಾಂಶು ಕೀರ್ತಿಧಾಮಂ ಸೋಮಂ ಭೂಲೋಕಮಲ್ಲವಲ್ಲಭನೀ ಲೋಕಮನಾಳ್ದನೆಸೆಯ ಸರ್ವಜ್ಞ ಮಹೀಪಾಲಂ ಭಾರತಿಗಂದು ಸನಾಥೋದಮಂ....." ಎಂಬಂಥ ವಾಕ್ಯಗಳು ಶಾಸನದಲ್ಲಿ ಗೋಚರಿಸುತ್ತವೆ.

ತಡಿಕೊಂಡ ಶಾಸನವು[೭೧] ಈತನ ಪ್ರಶಸ್ತಿಯನ್ನು ಸ್ವಲ್ಪ ಭಿನ್ನ ರೂಪದಲ್ಲಿ ಹೇಳಿದೆ. "ಸ್ವಸ್ತಿಯನೇಕ ವೈರಿಬಲ ಸುಭಟಗಿರಿ ನಿರ್ಘಾತಂ ವೀರವಿಖ್ಯಾತಂ ವೀರಾವತಾರಂ (ಗಂಡ) ರಹಿತಂ ಮೊನು ಗೊಟ್ಟಾದಿತ್ಯಂ ಯಾಚಕ ಜನ ನಿಧಿನಿಧಾನಂ ಬಂಟರಭಾವಂ ಪರಿನಾರೀದೂರಂ ಸರಣಾಗತಂ ಪ್ರಿಯಂಬಿಲುವಿದ್ಯಾರಾಮಂ.... ಕಾವಂ ಕುಮಾರ ಕಣ್ಣೀರವ.... (ಲಳಿ)ತ ರೂಪವಿದ್ಯಾಧಾರಂ ಮಾವನಗಂಧವಾರಣಂ ಬಿಡ್ವಗಂಡು ಸೂಕ್ತ ಬಳಸುವ ನಾಯಕರ ಗಂಡ ಪಗೆಯಬೆಂಕೊಳ್ವಂ ಮಚ್ಚರಿಪ್ಪರ ಗಂಡದಾಯಿಮ್ರಿಗ ಬೇಟೆಕಾಜಿವ ಯರಿಬಳ ಸೂದ್ರಕಂ ಒಂಟಿಮನ್ನಿಜೀವಂ ಸಂಗ್ರಾಮ ಭೀಮಂ ದೀನಾನಾ ತರ್ಗ್ಗೆ ಪಿರಿದೀವಚಾಗಿ ಮುಪ್ಪನಸಿಂಗಂ ನೊಳಂಬನ ಸಿಂಗಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮಚ್ಚಾಳುಕ್ಯ ಭೂಲೋಕಮಲ್ಲಂ" ಎಂದು ಈತನ ವಿದ್ವತ್ತು, ಶೌರ್ಯ, ಸಾಹಸ, ದಾನ, ಇತ್ಯಾದಿ ಗುಣಗಳನ್ನೆಲ್ಲ ಬಣ್ಣಿಸಿದೆ. ನಾರಂಗವಾಡಿ ಶಾಸನದಲ್ಲಿ[೭೨] "ಶ್ರೀ

ರಮಣೀಶ ಸಿದ್ಧದಿ ವಿಜೇಂದ್ರ ಫಣೀಂದ್ರ ಚಂದ್ರಾರ್ಕ್ರೀ ರಮಣೀವ ವಂದಿತ ಪಾದಾಂಬುರುಹದ್ವಯ ಸುದ್ದ ಬುದ್ಧ ಸಾಂಖ್ಯರುಹ ಯೋಗ ಯೋಗಿ ಹೃದಯೋಜ್ವಲ ಮಾನಸ ರಾಜಹಂಸ ಮುರಾರಿ ವೃಕ್ಷ ಧ್ವಜಮ್ ನಮಗೆ ಮಾಳ್ಕೆ ನಿರಂತರ ಸಂಖ್ಯ ಕೋಟಿಯ॥ ಶ್ರೀಮಚ್ಚಾಳೂಕ್ಯವಂಶವ್ಯೋಮಾಮೃತ ಕಿರಣ ನೃಪಲಲಾಮಂ ನೃಪ ಚೂಡಾಮಣಿ ಧರಿತ್ರಿಯುಳ್ಳನ ಸೋಮೇಶ್ವರ ದೇವ ರಾಜ್ಯ ಸರ್ವಾಭ್ಯುದಯಂ" ಎಂದು ಬರುತ್ತದೆ.

ಚಾಳುಕ್ಯ ವಂಶದ ಪರಂಪರಾಗತ ಪ್ರಶಸ್ತಿಗಳೊಂದಿಗೆ ತನ್ನದೇ ಆದ ಸ್ವಾರ್ಜಿತ ಬಿರುದುಗಳನ್ನು ಇವನು ಧರಿಸಿದ್ದಾನೆ. ಗೂಡೂರು[13] ಶಾಸನದಲ್ಲಿ "ಮಹಾಮಂಡಳೇಶ್ವರಂ, ವೀರಮಹೇಶ್ವರಂ", "ವಿಜಯಲಕ್ಷ್ಮೀನಿವಾಸಂ; ರಕ್ಷದಕ್ಷ ದಕ್ಷಿಣದೋರ್ದ್ದಂಡಂ, ದ್ವಾದಶಮಂಡಳಿಕ (ರೊಳು) ಮಾರ್ತ್ತಣ್ಡಂ ಪ್ರತಾಪ್ರಕ್ರಾನವ ಖಂಡಭೂಮಂಡಳಂ, ರಾಜಲೀಳಾಚಮತೃತಾಖಂಡಳಂ ಕೋದಂಡ ಚತುರ್ಭ್ಭುಜಂ, ಶೃಂಗಾರಮಕರಧ್ವಜಂ, ತ್ರಿಭುವನರಂಗ, ಪ್ರಾವರ್ತಿತ ಕೀರ್ತಿ ನರ್ತ್ತಕೀ ನರ್ತ್ತನ ಸೂತ್ರಧಾರಂ, ಶರಣಾಗತವಜ್ರಪ್ರಾಕಾರಂ ಮೂರುರಾಯಕಲಿಕುವರ ಬಿರುದಹೃದಯಾಕಂಪಂ ತ್ಯಾಗಝುಂಪನರ್ತ್ಥಿಜನ ಚಿನ್ತಿತಾರ್ತ್ಥ ಚಿಂತಾಮಣಿ ಸುಭಟ ಮಂಡಳಿಕ ಮಕುಟ ಚೂಡಾಮಣಿ ಕಾಂತಳರಾಜ್ಯಾಭ್ಯುದಯಯ್ಕ ಕಾರಣಂ ಬಪ್ಪನಗಂಧವಾರಣಂ ಶ್ರೀ ಮಚ್ಚಾಳುಕ್ಯ ಗಂಗ ಪೆರ್ಮ್ಮಡಿ ಕುಮಾರಂ ಸೋಮೇಶ್ವರದೇವ" ಎಂದು ಮುಂತಾಗಿ ಈತನ ಪ್ರಶಸ್ತಿಯನ್ನು ಹೇಳಲಾಗಿದೆ. ಇದೇ ರೀತಿ ಕೋಲನುಪಾಕ[14] ಶಾಸನವು 'ಚಾಳುಕ್ಯ ಗಂಗಮಹಾರಾಜಾಧಿರಾಜ ಪರಮೇಶ್ವರಂ, ವಿಜಯಲಕ್ಷ್ಮೀ ನಿವಾಸ ದಕ್ಷಿಣದೋರ್ದ್ದಣ್ಡಂ ದ್ವಾದಶಮಣ್ಣಳಿಕಮ್ಮಣ್ಣಳಿಕಮಣ್ಡಳಿಮಾರ್ತಣ್ಣಂ ಕುಂತಳರಾಜ್ಯಾಭ್ಯುದಯ ಕಾರಣಂ, ಬಪ್ಪನಗನ್ಧವಾರಣಂ' ಮೊದಲಾದ ಪ್ರಶಸ್ತಿಗಳನ್ನು ನಿರೂಪಿಸುತ್ತದೆ. ಮೇಲಿನ ಪ್ರಶಸ್ತಿಗೆ ಪ್ರಶಸ್ತಿ ಇವನು ಚಕ್ರವರ್ತಿಯಾಗುವುದಕ್ಕೆ ಪೂರ್ವದಲ್ಲಿದ್ದವುಗಳಾಗಿವೆ. ಚಕ್ರವರ್ತಿಯಾದ ಮೇಲೆ ಯಥಾ ಪ್ರಕಾರ ತನ್ನ ತಂದೆ, ಅಜ್ಜಂದಿರು ಧರಿಸಿರುವ ಪ್ರಶಸ್ತಿಗಳನ್ನು ಇವನು ಧರಿಸಿದ್ದಾನೆ.

ಇವನ ಪ್ರಶಸ್ತಿಗಳಿಂದ ಇವನು ಸಾಮ್ರಾಜ್ಯದ ದಕ್ಷಿಣ ಭಾಗವನ್ನು ರಕ್ಷಿಸುತ್ತಿದ್ದನೆಂಬುದು ಗೊತ್ತಾಗುತ್ತದೆ. ಅಲ್ಲದೆ ಕುಂತಳ ರಾಜ್ಯಾಭ್ಯುದಯಕ್ಕೂ ಕಾರಣೀಭೂತನಾಗಿದ್ದಾನೆ. ಯುದ್ಧಗಳಲ್ಲಿ ಭಾಗವಹಿಸಿ ಶತ್ರುಗಳನ್ನು ಸೋಲಿಸಿ ತಂದೆಯ ರಕ್ಷಕನಾಗಿದ್ದಾನೆ. ಇವನು ಗೈದ ಸಾಹಸಗಳನ್ನು ಗೂಡೂರು ಮತ್ತು ಕೋಲುನುಪಾಕ ಶಾಸನಗಳು ವಿವರವಾಗಿ ಹೇಳುತ್ತವೆ.

ಸೋಮೇಶ್ವರನು ಕೇವಲ ಯುವರಾಜ, ಚಕ್ರವರ್ತಿಯಾಗಿ ಪ್ರಸಿದ್ಧಿಯನ್ನು ಪಡೆಯಲಿಲ್ಲ. ಅವನು ಕವಿಯಾಗಿಯೂ ಜನಪ್ರಿಯನಾಗಿದ್ದನು. ಇವನು ಸಂಸ್ಕೃತದಲ್ಲಿ ಕೃತಿ ರಚನೆ ಮಾಡಿದ್ದು ಅವು ೧. ಅಭಿಲಾಷಿತಾರ್ಥ ಚಿಂತಾಮಣಿ ೨. ವಿಕ್ರಮಾಂಕಾಭ್ಯುದಯಂ, ಮೊದಲನೆಯ ಕೃತಿ ಅನೇಕ ವಿಷಯವನ್ನೊಳಗೊಂಡು ಸಂಸ್ಕೃತದ ಮೊಟ್ಟಮೊದಲನೆಯ ವಿಶ್ವಕೋಶ ಎಂಬ ಮನ್ನಣೆಗೆ ಪಾತ್ರವಾಗಿದೆ. ಎರಡನೆಯ ಕೃತಿ ಅವನ ತಂದೆ ವಿಕ್ರಮಾದಿತ್ಯನನ್ನು ಕುರಿತದ್ದಾಗಿದೆ. ಬಿಲ್ಹಣನು

ಬರೆದಿರುವ 'ವಿಕ್ರಮಾಂಕದೇವಚರಿತಂ' ಮಹಾಕಾವ್ಯದಲ್ಲಿ ತಂದೆ ವಿಕ್ರಮಾದಿತ್ಯನ ವ್ಯಕ್ತಿತ್ವ ನಿರೂಪಣೆ ಸರಿಯಾಗಿ ಬಂದಿಲ್ಲವೆಂದು ಅದರ ಕೊರತೆಯನ್ನು ನೀಗಿಸುವುದಕ್ಕೆ 'ವಿಕ್ರಮಾಂಕಾಭ್ಯುದಯಂ' ಕಾವ್ಯವನ್ನು ಬರೆದುದಾಗಿ ಆತನೇ ತಿಳಿಸಿದ್ದಾನೆ.[೨೫]

ಇನ್ನೂ ಆತನ ಬಿರುದುಗಳ ಅರ್ಥ ಹೀಗಿವೆ: 'ಭೂಲೋಕಮಲ್ಲ' ಎಂದರೆ ಜಗತ್ತಿನಲ್ಲಿ ಬಹಳ ಶೂರನಾದವನು, 'ಸರ್ವಜ್ಞ ಚಕ್ರವರ್ತಿ' ಎಲ್ಲವನ್ನು ಬಲ್ಲವನು ಎಂದೂ, 'ಚಕ್ರರಾಜಸರ್ವಜ್ಞನೃಪ' ಎಂದರೆ ಚಕ್ರಾಯುಧವನ್ನು ಹೊಂದಿದವನು ಅಥವಾ ವಿಷ್ಣು ಎಂದು, 'ಮಹಾಮಂಡಳೇಶ್ವರ' ಎಂದರೆ ಶ್ರೇಷ್ಠವಾದವನು ಅಥವಾ ಶ್ರೇಷ್ಠವಾದ ಪ್ರಾಂತ್ಯವನ್ನು ಆಳುವವನು ಎಂದರ್ಥ. 'ವೀರಮಹೇಶ್ವರಂ' ವೀರರಲ್ಲಿ ಬಹಳ ಶ್ರೇಷ್ಠನಾದವನು ಎಂದು, 'ವಿಜಯಲಕ್ಷ್ಮೀನಿವಾಸಂ' ಯುದ್ಧದಲ್ಲಿ ವಿಜಯ ಹೊಂದಿ ಅಪಾರ ಸಂಪತ್ತನ್ನು ಕೊಳ್ಳೆ ಹೊಡೆಯುವವನು ಎಂದು ಈ ಹಿನ್ನೆಲೆಯಲ್ಲಿ ಬಿರುದು ಬಂದಿರುತ್ತದೆ.

### ಎರಡನೇ ಜಗದೇಕಮಲ್ಲ (ಕ್ರಿ.ಶ. ೧೧೩೮-೧೧೫೧)

ಮೂರನೇ ಸೋಮೇಶ್ವರನ ಮರಣದ ನಂತರ ಅವನ ಮಗ ಎರಡನೇ ಜಗದೇಕಮಲ್ಲನು ಅಧಿಕಾರಕ್ಕೆ ಬಂದನು. ಇವನನ್ನು ಪೆರ್ಮ ಅಥವಾ ಎರಡನೇ ಜಗದೇಕಮಲ್ಲ ಎಂದು ಕರೆಯಲಾಗಿದೆ. ಈತನ ಬಿರುದುಗಳು ಪೆರ್ಮ, ಪೆರ್ಮಾಡಿ, ಪೆರ್ಮಾಡಿ ದೇವ ಕಾಲಾಂತರದಲ್ಲಿ ಶಾಸನಗಳಲ್ಲಿ 'ಪ್ರತಾಪ ಚಕ್ರವರ್ತಿ' ಎಂದು ವರ್ಣಿಸಲಾಗಿದೆ. 'ಪೆರ್ಮಾಡಿ' ಎಂದರೆ ಹಿರಿಮೆಯನ್ನು ಹೊಂದಿರುವವನು, 'ಚಾಲುಕ್ಯರಲ್ಲಿಯೇ ತೇಜಸ್ಸನ್ನು ಹೊಂದಿರುವವನು ಅಥವಾ ಪ್ರಕಾಶಿಸುವವನು ಎಂದು 'ಚಾಲುಕ್ಯ ಪ್ರತಾಪ ಚಕ್ರವರ್ತಿ' ಎಂಬ ಬಿರುದಿನಿಂದ ತಿಳಿಯಬಹುದು. ಇವನು ಯಾವ ರಾಣಿಯ ಮಗನೆಂದು ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಹಾವೇರಿ ಶಾಸನವು[೬೦] "ಭೂಲೋಕಮಲ್ಲನುರ್ವ್ವೀಲೋಲಂ ಮಗನವನ ಸೂನು ಜಗದೇಕನೃಪಂ" ಎಂದು ಹೇಳಿದೆ. ಇದುವರೆಗೆ ತಿಳಿದಂತೆ ಜಗದೇಕಮಲ್ಲನ ಮೊದಲ ಶಾಸನದ ಕಾಲ ಕ್ರಿ.ಶ. ೧೧೨೯ರ ವೇಳೆಗಾಗಲೇ ಮಹಾಮಂಡಳೇಶ್ವರನೆನಿಸಿಕೊಂಡಿದ್ದನೆಂದು ತಿಳಿದುಬರುತ್ತದೆ. ಆದರೆ ಶಾಸನದಲ್ಲಿ ಈತ ಯಾವುದೇ ಪ್ರಾಂತ್ಯದ ಅಧಿಕಾರಿಯಾಗಿದ್ದನೆಂದು ಹೇಳಿಲ್ಲ. ಭಲ್ಲುಂಕೆ ಪಟ್ಟಣ ಭಾಲ್ಕಿ ರಾಜಧಾನಿಯಾದ ಕಲ್ಯಾಣಕ್ಕೆ ಸಮೀಪದಲ್ಲಿದ್ದ ನಗರ ಸಹಜವಾಗಿಯೇ ಅರಸನ ನೇರವಾದ ಆಡಳಿತಕ್ಕೆ ಅಧೀನವಾದ ನಗರವಾಗಿದ್ದಿರಬಹುದು. ಅಲ್ಲದೇ ಪೆರ್ಮಾಡಿ ಕೇವಲ ಮಹಾಮಂಡಳೇಶ್ವರ ಪದವಿಯನ್ನು ಪಡೆದು ಆಡಳಿತದ ಜವಾಬ್ದಾರಿ ವಹಿಸಿಕೊಂಡಿದ್ದಿರಬಹುದು. ಇನ್ನೂ ಆಡಳಿತದ ಜವಾಬ್ದಾರಿ ವಹಿಸಿಕೊಂಡಿರಲಿಲ್ಲವೆಂದು ಹೇಳಬಹುದು. ಅಲ್ಲದೆ ಈ ಶಾಸನದ ಕಾಲ ಕ್ರಿ.ಶ. ೧೧೨೯ ಎಂದ ಮೇಲೆ ಆ ವೇಳೆಗಾಗಲೇ ಈತನಿಗೆ ಸುಮಾರು ೨೦ ವರ್ಷಗಳೆಂದು ಊಹಿಸಿದರೂ ಈತ ಕ್ರಿ.ಶ.ಸು. ೧೧೦೯ರಲ್ಲಿ ಜನಿಸಿದನೆಂದಾಗುತ್ತದೆ.

ಅಂದರೆ ಜಗದೇಕಮಲ್ಲನು ತನ್ನ ಅಜ್ಜನಾದ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿಯೇ ಮಹಾಮಂಡಳೇಶ್ವರನಾಗಿ ಸೇವೆಯನ್ನು ಸಲ್ಲಿಸುತ್ತಿದ್ದನೆಂದು ತಿಳಿದುಬರುತ್ತದೆ. ಕ್ರಿ.ಶ. ೧೦೯೭ಕ್ಕೆ ಸಂಬಂಧಿಸಿದ ಹೊಸೂರ ಶಾಸನವು ಇವನನ್ನು ಪೆರ್ಮಜಗದೇಕಮಲ್ಲ ಎಂದು ಹೆಸರಿಸಿದರೆ ಕ್ರಿ.ಶ. ೧೦೯೯ರ ಭಾಲ್ಕಿ ಶಾಸನವು ಕುಮಾರ 'ಹೆಮ್ಮಾಡಿದೇವ' ಎಂಬುದಾಗಿ ಹೆಸರಿಸಿದೆ. ಅಂದರೆ ಇವನು ಸಹ ತನ್ನ ಅಜ್ಜ ಹಾಗೂ ತಂದೆಯಂತೆ ಶೂರನಾಗಿದ್ದನೆಂದು ಹೇಳಬಹುದು. ನರಗುಂದ[೬೬] ಈತನ ಶೌರ್ಯ ಸಾಹಸಗಳನ್ನು ವರ್ಣಿಸಿದೆ.

ಕಣವಿ ಶಾಸನದಲ್ಲಿ[೬೭] ಸಾಂಪ್ರದಾಯಿಕ ಬಿರುದುಗಳಲ್ಲದೆ 'ಚಾಲುಕ್ಯವಂಶಲಲಾಮ' ಎಂದರೆ ಚಾಲುಕ್ಯ ವಂಶದ ಧ್ವಜವನ್ನು ಹೊಂದಿದವನು ಅಥವಾ ಕುದುರೆಯ ಹಣೆಯಲ್ಲಿ ಬರೆಯುವ ಚಿತ್ರವನ್ನು ಬರೆದುಕೊಂಡವನು ಎಂದು ಅರ್ಥ. 'ಉದ್ದಾಮಪ್ರತಾಪ' ಎಂದರೆ ಭಯಂಕರವಾದ ಪ್ರಭಾವವನ್ನು ಹೊಂದಿದವನು ಎಂದರ್ಥ. 'ವಸುಧಾಮ' ಐಶ್ವರ್ಯ ಹೊಂದಿದವನು ಎಂದು, 'ಸರ್ವಜ್ಞ ಚಕ್ರವರ್ತಿಯಸುತ'ನೆಂದು ಹೊಸೂರು[೬೮] ಶಾಸನದಲ್ಲಿ ಬಣ್ಣಿಸಿದೆ. ಪ್ರತಾಪ ಚಕ್ರವರ್ತಿ ಜಗದೇಕಮಲ್ಲದೇವನು ವಿಜಯ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನ ಚಂದ್ರರ್ಕಾತಾರಂಬರಾಗಿ ಆಳಿದನೆಂದು ಮುಳಗುದಿಂದ ಶಾಸನದಿಂದ ತಿಳಿಯುತ್ತದೆ.[೭೦] ಕಣವಿ,[೭೧] ಎಲಿಶಿರೂರು[೭೨] ಶಾಸನಗಳಿಂದ ಇವನು ತನ್ನ ಅಜ್ಜ ಆರನೆಯ ವಿಕ್ರಮಾದಿತ್ಯನ ಹಾಗೆ ಜಗದೇಕಮಲ್ಲವರ್ಷವನ್ನು ಆರಂಭಿಸಿದುದು ಸ್ಪಷ್ಟವಿದೆ.

ಹೊಸೂರು ಶಾಸನ 'ಪ್ರಕಟಿತಯಶೋಭಿವರ್ಣನು, ಅವಧಿಗುಣಾಣ್ವಿತನೂ, ಸಕಲ ಕಲೆಗಳಲ್ಲಿ ಅಧಿಕನೂ ಆದ ಎರಡನೆಯ ಜಗದೇಕಮಲ್ಲನನ್ನು ಹೊಗಳದ ಪ್ರಕಾಶಭಟಾರಕರು ಯಾರಿದ್ದಾರೆ' ಎಂದು ಕೇಳುತ್ತಿದೆ.[೭೩] ಇದರಿಂದ ಈತನು ಜನಾನುರಾಗಿ ದೊರೆಯಾಗಿದ್ದನೆಂದು ತಿಳಿಯುತ್ತದೆ. ಈತನು ಕಣವಿಯ ಮೂಲಸ್ಥಾನ ದೇವರಿಗೆ ತೋಂಟದ ಪೆರ್ಜುಂಕ ದಾನ ಬಿಟ್ಟನೆಂದು ತೋರುತ್ತದೆ.[೭೪]

ಜಗದೇಕಮಲ್ಲ ಕ್ರಿ.ಶ. ೧೧೩೮ರಲ್ಲಿ ಅಧಿಕಾರಕ್ಕೆ ಬಂದನು ಎಂದು ಅಣಂದೂರು ಶಾಸನವು[೭೫] ಇವನ ಆಳ್ವಿಕೆಯ ಪ್ರಾರಂಭಿಕ ದಿನದ ಬಗೆಗೆ ಖಚಿತವಾದ ಮಾಹಿತಿಯನ್ನು ಒದಗಿಸುತ್ತದೆ. ಈತನೂ ಸಹ ಸುಮಾರು ೧೩ ವರ್ಷಗಳ ಕಾಲ ರಾಜ್ಯಭಾರ ನಡೆಸಿದ ನಂತರ ಈತನ ಸಹೋದರನಾದ ಮೂರನೆಯ ತೈಲಪನು ಅಧಿಕಾರಕ್ಕೆ ಬಂದನು.

### ಮೂರನೇ ತೈಲಪ (ಕ್ರಿ.ಶ. ೧೧೪೯–೧೧೬೨)

ಮೂರನೆಯ ಸೋಮೇಶ್ವರನ ಕಿರಿಯ ಮಗನಾದ ತೈಲಪನು ಸಹ ಯಾವ ರಾಣಿಯ ಮಗನೆಂದು ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಜಗದೇಕಮಲ್ಲನಿಗಿಂತ ೨–೩ ವರ್ಷಗಳು

ಕಿರಿಯವನಾಗಿರಬಹುದಾದ ಮುಮ್ಮಡಿ ಅಥವಾ ಮೂರನೇ ತೈಲಪನು ಕ್ರಿಶ. ಸು.೧೦೮೩ರಲ್ಲಿ ಜನಿಸಿದ್ದಿರಬಹುದೆಂದು ಬಿ.ಆರ್.ಗೋಪಾಲರವರು ಭಾಲ್ಕಿ ಶಾಸನವನ್ನು ಆಧಾರವಾಗಿಟ್ಟುಕೊಂಡು ಊಹಿಸಿದ್ದಾರೆ.[೯೬] ಕೊಲ್ಲೂರು ಶಾಸನವು[೯೭] "ವಿಕ್ರಮಾಂಕನ ತನಯಂ ಭೂಲೋಕಮಲ್ಲ ಭುಭುಜಗೆ ಜನಿಸಿದವನ ಭಯ ಪದನಘ ಜಗದೇಕಮಲ್ಲದೇವನೊಗೆದಂ॥ ಜಗದೇಕಮಲ್ಲನ ತನುಜಂ ಜಗತೀವಿಖ್ಯಾತನತಿ ಬಳನಿಜಭುಳದಿಂ ನೆಗಳ್ದಂ ನೂರ್ಮ್ಮಡಿ ತೈಲಪ ಜನಾಧಿಪಂ ಆದ ಚಾಳುಕ್ಯ ರಾಜ್ಯದ ಭಯದಂ।" ಎಂದು ತಿಳಿಸುತ್ತದೆ. ಈತನು ಚಕ್ರವರ್ತಿಯಾಗಿ ಸಿಂಹಾಸನ ಏರಿದುದ್ದನ್ನು ಎಳವತ್ತಿ[೯೮] ಹಾಗೂ ಹೊಸೂರು ಶಾಸನಗಳು[೯೯] ಸ್ಪಷ್ಟಪಡಿಸುತ್ತವೆ. ಈತ ೧೧೪೯ರಲ್ಲಿ ಅಧಿಕಾರಕ್ಕೆ ಬಂದು ಕ್ರಿಶ. ೧೧೬೨ರವರೆಗೆ ಆಳಿದನು. 'ತ್ರೈಲೋಕ್ಯಮಲ್ಲ' ಎಂಬ ಬಿರುದಿನಿಂದ ಪಟ್ಟವೇರಿದನು. ಈತನಿಗೆ ತ್ರಿಭುವನಮಲ್ಲ ಎಂಬ ಪರ್ಯಾಯ ನಾಮಗಳಿದ್ದ ಬಗ್ಗೆ ಮೇಲಿನ ಶಾಸನಗಳಿಂದ ಖಚಿತವಾಗುತ್ತದೆ. ಈತನನ್ನು ಕಲ್ಲೂರು ಶಾಸನದಲ್ಲಿ 'ರಕ್ಕಸಗಂಗ ಚಾಲುಕ್ಯ ಚಕ್ರವರ್ತಿ' ಎಂದು ಕರೆಯಲಾಗಿದೆ.[೧೦೦] ಬಲ್ಲುಟಗಿ ಶಾಸನವೊಂದು 'ನೂರ್ಮಾಡಿ ತ್ರೈಲೋಕ್ಯಮಲ್ಲನೆಂದು' ಬಣ್ಣಿಸಿದೆ.[೧೦೧] ಗೊಲ್ಲಪಲ್ಲಿ ಶಾಸನವಂತೂ 'ವಿಷ್ಣುವರ್ಧನೆಂದು' ಕೀರ್ತಿಸಿದೆ.[೧೦೨] ಎಳವತ್ತಿ ಶಾಸನದಲ್ಲಿ ಈತನನ್ನು "ಶ್ರೀಮದ್ವಿಕ್ರಮ ಚಕ್ರವರ್ತಿ ತ್ರಿಭುವನಮಲ್ಲ ವೀರಸಂಗಿ ದೇವರಸ" ಎಂದು ಮೊದಲ ಬಾರಿಗೆ ಕರೆದಿದೆ.[೧೦೩] ಈತ ಮಾಳವ, ಆಂಧ್ರ, ಗೂರ್ಜರನ್ನು ಸೋಲಿಸಿದವನೆಂದೂ ಈ ಶಾಸನ ಹೇಳುತ್ತದೆ. ಈತನಿಗೆ ಮೊದಲೇ ಉಲ್ಲೇಖ ಮಾಡಿದ ಎಲ್ಲ ಸಾಂಪ್ರದಾಯಿಕ ಬಿರುದುಗಳಿದ್ದವೆಂದು ಈತನ ಕಾಲದ ಎಲ್ಲ ಶಾಸನಗಳು ಸಾರುತ್ತಿವೆ. ರಾಜ್ಯದ ಉತ್ತರೋತ್ತರ ಅಭಿವೃದ್ಧಿಗಾಗಿ ಶ್ರಮಿಸಿದನೆಂದೂ, ಪ್ರವರ್ಧಮಾನನಾಗಿ ಬೆಳಗಿದನೆಂದೂ ಕೀರ್ತಿಸುತ್ತಿವೆ.

ತೈಲಪನು ತಂದೆಯ ಜೊತೆಗಿದ್ದುಕೊಂಡು ಕಲ್ಯಾಣದಲ್ಲಿಯೇ ಆಳ್ವಿಕೆಯನ್ನು ನಡೆಸುತ್ತಿದ್ದಂತೆ ತೋರುತ್ತದೆ. ಗಂಗಾಪುರಂ ಶಾಸನವು[೧೦೪] ಭೂಲೋಕಮಲ್ಲನು ಕಲ್ಯಾಣಪುರದಿಂದ ಆಳುತ್ತಿದ್ದಾಗ ಇವನ ಮಗ ತೈಲಪದೇವನ ದಂಡನಾಯಕ ಜಯಾನಂದಭಟ್ಟರ ಸಾನ್ನಿಧ್ಯದಲ್ಲಿ ಕಂದೂರು ನಾಡಿನ ಸುಂಕವೆರ್ಗ್ಗಡೆ ಬವ್ವರಸ ಮತ್ತು ಇತರ ಅಧಿಕಾರಿಗಳು, ಸಮಸ್ತ ಸೆಟ್ಟಿಕಾರರೂ ಕಟ್ಟೆಯ ಸೋಮನಾಥ ದೇವರಿಗೆ ದಾನ ನೀಡಿದ್ದುದನ್ನು ತಿಳಿಸುತ್ತದೆ. ಅಲ್ಲದೆ ರಾಯಚೂರ ಶಾಸನವು[೧೦೫] ಸಹ ತೈಲಪದೇವನ ಆಳ್ವಿಕೆಯನ್ನು ತಿಳಿಸುತ್ತದೆ. 'ತ್ರೈಲೋಕಮಲ್ಲ' ಇಂದು ಇವನ ನೆಚ್ಚಿನ ಬಿರುದಾಗಿತ್ತು. ಯಳವತ್ತಿ ಶಾಸನ ಇವನನ್ನು 'ತ್ರಿಭುವನಮಲ್ಲ' ಎಂದು ಕರೆದಿದೆ.

ದೊರೆತಿರುವ ಶಾಸನಾಧಾರಗಳಿಂದ ಮೂರನೆಯ ತೈಲಪನ ಕುಟುಂಬದ ಸದಸ್ಯರ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಇವನಿಗೆ ನಾಲ್ಕನೆಯ ಸೋಮೇಶ್ವರನೆಂಬ ಮಗನಿದ್ದು ಕಲಚೂರಿಗಳ ಅವನತಿಯ ನಂತರ ಸ್ವಲ್ಪ ಅವಧಿಯವರೆಗೆ ಚಾಳುಕ್ಯ ಸಾಮ್ರಾಜ್ಯವನ್ನು ಆಳಿದನೆಂದು ತಿಳಿದುಬರುತ್ತದೆ.

## ನಾಲ್ಕನೇ ಸೋಮೇಶ್ವರ (ಕ್ರಿ.ಶ.೧೧೮೨-೧೧೮೯)

ಮೂರನೇ ತೈಲಪನು ನಿಧನ ಹೊಂದಿದ ನಂತರ ಇವನ ಮಗ ನಾಲ್ಕನೇ ಸೋಮೇಶ್ವರನು ಕ್ರಿ.ಶ. ೧೧೮೨-೧೧೯೮ರವರೆಗೆ ಚಾಲುಕ್ಯ ವಂಶದ ಕೊನೆಯ ದೊರೆಯಾಗಿ ಆಳಿದನು. ಚಾಲುಕ್ಯ ಸಾಮ್ರಾಜ್ಯ ಅಸ್ತಂಗತವಾಯಿತೆಂದು ಭಾವಿಸಿ ನಿರಾತಂಕವಾಗಿ ಆಳುತ್ತಿದ್ದ ಕಳಚೂರಿ ಬಿಜ್ಜಳನಿಗೆ ಎದುರಾಗಿ ನಿಂತವನು ನಾಲ್ಕನೇ ಸೋಮೇಶ್ವರ. ಹೊಸೂರು ಶಾಸನ ಈತನನ್ನು "ಸ್ವಸ್ತಿ ಶ್ರೀಮತು ಚಾಲುಕ್ಯ ಚಕ್ರವರ್ತಿ ಸೋಮೇಶ್ವರದೇವ" ಎಂದು ಸ್ಪಷ್ಟವಾಗಿ ಕರೆದಿದೆ.[೧೦೬] ಇದರಿಂದ ನಾಲ್ಕನೆಯ ಸೋಮೇಶ್ವರನ ಆಳ್ವಿಕೆ ಇದ್ದುದು ಖಚಿತವಾಗುತ್ತದೆ. ಇವನು ಕ್ರಿ.ಶ. ೧೧೮೨-೧೧೯೮ರವರೆಗೆ ಚಾಲುಕ್ಯವಂಶದ ಕೊನೆಯ ದೊರೆಯಾಗಿ ಆಳಿದನು. ನಾಲ್ಕನೇ ಸೋಮೇಶ್ವರನು ಕಲಚೂರಿ ದೊರೆಗಳನ್ನು ಸೋಲಿಸಿ ಚಾಲುಕ್ಯ ಸಾಮ್ರಾಜ್ಯವನ್ನು ಪುನಃ ಸ್ಥಾಪಿಸಿದನು. ಆದ್ದರಿಂದ ಇವನು 'ಕಳಚೂರ್ಯಕುಲನಾಶಕ' ಎಂಬ ಬಿರುದು ಗಳಿಸಿದನು. ಅಷ್ಟೇ ಅಲ್ಲದೆ ಇವನಿಗೆ 'ತ್ರಿಭುವನಮಲ್ಲ', 'ಚಾಲುಕ್ಯ ಚಕ್ರವರ್ತಿ', 'ಚಾಲುಕ್ಯ ಪ್ರತಾಪಚಕ್ರವರ್ತಿ', 'ವೀರಸೋಮೇಶ್ವರ', 'ವೀರನಾರಾಯಣ', 'ಅಹಮವಲ್ಲ' ಎಂಬ ಬಿರುದುಗಳಿದ್ದವು. ಹಾಗೂ ವಂಶಪರಂಪರೆಯಾಗಿ ಬಂದ ಪ್ರಶಸ್ತಿಗಳನ್ನು ಸಹಿತ ಹೊಂದಿದ್ದನು. ಕ್ರಿ.ಶ. ೧೧೮೫ರ ಗದಗ ಶಾಸನದಲ್ಲಿ[೧೦೭] ನಾಲ್ಕನೇ ಸೋಮೇಶ್ವರನ ಕಾಲದಲ್ಲಿ ವಿಷ್ಣುವರ್ಧನ ಬೀಚಿ ಶೆಟ್ಟಿಯು ಯಮೇಶ್ವರ ದೇವರಿಗೆ ಹಣದಾನ ಮಾಡಿದ ವಿಷಯವಿದೆ. ಗದಗ ಶಾಸನದಲ್ಲಿ[೧೦೮] ಹೊಯ್ಸಳ ರಾಜನು ಚಾಳುಕ್ಯ ದಂಡಾಧೀಶ ಬೊಮ್ಮನನ್ನು ಸೋಲಿಸಿ ಸಾರ್ವಭೌಮತ್ವವನ್ನು ಸಂಪಾದಿಸಿದನೆಂದು ಉಲ್ಲೇಖವಿದೆ.

ಈತನ ಬಿರುದಾದ 'ತ್ರಿಭುವನಮಲ್ಲ' ಎಂಬ ಬಿರುದಿನ ಅರ್ಥವನ್ನು ಈ ಹಿಂದೆ ಹೇಳಲಾಗಿದೆ. ಚಾಲುಕ್ಯರಲ್ಲಿಯೇ ಸಾರ್ವಭೌಮನೆಂದು 'ಚಾಲುಕ್ಯ ಚಕ್ರವರ್ತಿ' ಚಾಲುಕ್ಯರಲ್ಲಿಯೇ ತೇಜಸ್ಸು ಅಥವಾ ಪ್ರಕಾಶಿಸುವವನು ಎಂದು ಈತನ ಚಾಲುಕ್ಯ ಪ್ರತಾಪಚಕ್ರವರ್ತಿ ಎಂಬ ಬಿರುದಿನಿಂದ ತಿಳಿಯಬಹುದು. ಬಲಿಷ್ಠವಾದ ಅಥವಾ ಶ್ರೇಷ್ಠನಾಗಿದ್ದನೆಂದು ಈತನ 'ವೀರಸೋಮೇಶ್ವರ' ಎಂಬ ಬಿರುದಿನಿಂದ ತಿಳಿಯಬಹುದು. ಶಕ್ತಿಯುತನಾಗಿದ್ದು ನೀರ ಮೇಲೆ ಮಲಗಿರುವ ವಿಷ್ಣುವಿನ ಅವತಾರದಂತೆ ಇದ್ದನೆಂದು 'ಅಹಮವಲ್ಲ'ನೆಂದರೆ ಯುದ್ಧದಲ್ಲಿ ಜಟ್ಟಿ ಸದಾ ಯುದ್ಧಸನ್ನದ್ಧನಾಗಿರು ಎಂದು ಈ ಬಿರುದಿನಿಂದ ತಿಳಿಯಬಹುದು.

ನಾಲ್ಕನೇ ಸೋಮೇಶ್ವರನ ಜೀವಿತಾವಧಿಯ ಕೊನೆಯ ಕಾಲಮಿತಿ ಕ್ರಿ.ಶ. ೧೧೯೮ರ ಡಿಸೆಂಬರ್ ೨೫, ಗದುಗಿನ ಶಾಸನವೊಂದು ಹೊಯ್ಸಳ ರಾಜನು ದಂಡಾಧಿಪತಿ ಬ್ರಹ್ಮನನ್ನು ಸೋಲಿಸಿ ಸಾರ್ವಭೌಮತ್ವವನ್ನು ಸಂಪಾದಿಸಿದನೆಂದು ಉಲ್ಲೇಖಿಸುತ್ತದೆ. ದಕ್ಷಿಣದ ಕಡೆಯಿಂದ ಹೊಯ್ಸಳರು, ಉತ್ತರದ ಕಡೆಯಿಂದ ಯಾದವರು, ತಮ್ಮ ತಮ್ಮ ರಾಜ್ಯ ವಿಸ್ತರಣೆಗಾಗಿ

ಮುನ್ನುಗ್ಗುತ್ತಿರುವಾಗ ನಾಲ್ಕನೇ ಸೋಮೇಶ್ವರನು ತನ್ನ ಅನುವಂಶಿಕ ರಾಜ್ಯದ ಅತ್ಯಲ್ಪ ಭಾಗವೊಂದರ ಮೇಲೆ ಸಾರ್ವಭೌಮತ್ವವನ್ನು ಉಳಿಸಿಕೊಂಡಿದ್ದು ಅನಂತರದ ಅಲ್ಪಕಾಲಾವಧಿಯಲ್ಲಿಯೇ ಈತನು ನಿಧನಹೊಂದಿರಬೇಕು. ಈತನೊಂದಿಗೆ ಕಲ್ಯಾಣ ಚಾಲುಕ್ಯ ಮನೆತನವೂ ಕೊನೆಗೊಂಡಿತು.

ಕ್ರಿ.ಶ. ೯೭೩ರಿಂದ ೧೧೮೯ರವರೆಗೆ ಸುಮಾರು ಎರಡು ಶತಮಾನಗಳ ಕಾಲ ಕಲ್ಯಾಣ ಚಾಲುಕ್ಯರ ಕರ್ನಾಟಕವನ್ನಾಳಿದ ಕರ್ನಾಟಕದ ಕಲೆ, ಸಾಹಿತ್ಯ, ಸಂಗೀತ, ನೃತ್ಯ, ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಗಳ ಮೂಲಕ ಇಡೀ ಸಾಂಸ್ಕೃತಿಕ ಕ್ಷೇತ್ರದ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸಿದರು. ಈ ಅಂಶವು ಗದಗ ಪ್ರದೇಶದಲ್ಲಿ ದೊರೆತ ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

### ೩.೨. ಮಹಾಮಂಡಳೇಶ್ವರರ ಬಿರುದಾವಳಿಗಳು

'ಮಹಾಮಂಡಳೇಶ್ವರ' ಎಂದರೆ ಭೂಮಿಗೆ ಅಥವಾ ವಿಭಾಗಕ್ಕೆ ಒಡೆಯ ಎಂದಾಗುತ್ತದೆ. ಇವರು ಕೆಲವೊಮ್ಮೆ ಒಂದು ಇಲ್ಲವೆ ಒಂದಕ್ಕಿಂತ ಹೆಚ್ಚು ವಿಭಾಗಗಳನ್ನು ಆಳುತ್ತಿದ್ದರು. ಮಾಂಡಳಿಕ, ಮಂಡಳೇಶ್ವರ ಮತ್ತು ಮಹಾಮಂಡಳೇಶ್ವರ ಎಂಬ ಪದಗಳು ಒಂದೇ ಅರ್ಥವನ್ನು ಕೊಡುವ ಪರ್ಯಾಯ ಪದಗಳು. ಸಾಮ್ರಾಜ್ಯದ ಆಡಳಿತವನ್ನು ನೋಡಿಕೊಳ್ಳಲು ರಾಜನೊಬ್ಬನಿಂದ ಅಸಾಧ್ಯ ಆದ್ದರಿಂದ ಅವನು ಸಾಮ್ರಾಜ್ಯದ ಆಡಳಿತದ ಸೌಲಭ್ಯಕ್ಕಾಗಿ ಅವುಗಳನ್ನು ನೋಡಿಕೊಳ್ಳಲು ಮಹಾಮಂಡಲೇಶ್ವರರನ್ನು ನೇಮಿಸುತ್ತಿದ್ದ. ಇವರು ರಾಜನ ಅಧೀನರಾಗಿ ಆಳುತ್ತಿದ್ದರೂ ಇವರು ಸಾಕಷ್ಟು ಅಧಿಕಾರ ಸ್ವಾತಂತ್ರ್ಯವನ್ನು ಹೊಂದಿದ್ದರು. ಆದರೆ ಮಹಾಮಂಡಳೇಶ್ವರ ಎನ್ನುವುದು ಮಂಡಳೇಶ್ವರ ಎನ್ನುವ ಪದವಿಗಿಂತ ದೊಡ್ಡದು. ಒಬ್ಬ ಮಹಾಮಂಡಲೇಶ್ವರ ಅಧೀನದಲ್ಲಿ ಹಲವು ಮಂಡಳೇಶ್ವರರಿರುತ್ತಿದ್ದರೆಂದು ಡಾ.ಎಂ.ಚಿದಾನಂದಮೂರ್ತಿಯವರು ಹೇಳಿದ್ದಾರೆ.[೧೯] ಇವರು ಚಕ್ರವರ್ತಿಗೆ ಅಧೀನರಾಗಿ ಕಪ್ಪವನ್ನು ಕೊಡುತ್ತಿದ್ದರು. ಒಂದು ವೇಳೆ ಕಪ್ಪ ಕೊಡದೇ ಹೋದರೆ ಅಂಥವರನ್ನು ಸೆದೆಬಡೆಯಲು ಚಕ್ರವರ್ತಿ ಇನ್ನೊಬ್ಬ ಮಹಾಮಂಡಳೇಶ್ವರನನ್ನು ಕಳುಹಿಸುತ್ತಿದ್ದನು. ಮಂಡಳೇಶ್ವರ ಪದವಿಯು ವಂಶಪಾರಂಪರ್ಯವಾಗಿ ಬಂದಿದ್ದರೂ ಕೆಲವು ಸಂದರ್ಭಗಳಲ್ಲಿ ಅರಸನು ನೇರ ನೇಮಕ ಮಾಡಿಕೊಳ್ಳುತ್ತಿದ್ದನು. ಇವರನ್ನು ನಿಯಂತ್ರಿಸಲು ಅರಸನು ತನ್ನ ಪುತ್ರರನ್ನೋ, ಸಹೋದರರನ್ನೋ ಅಥವಾ ಹಿರಿಯ ಮಗನನ್ನು ಯುವರಾಜ ಎಂದು ನೇಮಿಸುತ್ತಿದ್ದನು. ಮಹಾಮಂಡಳೇಶ್ವರರು ಸಹಿತ ಅರಸರಂತೆ ಅನೇಕ ಬಿರುದುಗಳನ್ನು ಹೊಂದಿದ್ದರು. 'ಭುಜಭಳಭೀಮ', 'ಸಾಹಸೋತುಂಗ', ಸತ್ಯಾರಾಧೀಯ, ನುಡಿದಂತೆ ಗಂಡ, ದಾನಗುಣ ಮಹೀಮ, ಪಂಚಮಹಾಶಬ್ಧ ಸಮಧಿಗತ ಪಂಚಮಹಾಶಬ್ದ ಮತ್ತು ಕುಳಕಮಲ ಮಾರ್ತಾಂಡ.

ಪಾದಪದ್ಮೋಪಜೀವಿ, ಪಾದಪಂಕಜ ಭ್ರಮರ ಇವು ಅವರ ಬಿರುದಾವಳಿಗಳು, ಬಿರುದುಗಳಂತೆ ಇವರು ತಮ್ಮದೇ ಆದ ವಂಶಪಾರಂಪರ್ಯವಾಗಿ ಬಂದ ರಾಜ್ಯಚಿಹ್ನೆ, ಧ್ವಜ

ಹಾಗೂ ರಾಜಮುದ್ರೆಗಳನ್ನು ಹೊಂದಿದ್ದಾರೆ. ಉದಾ; ಚಾಲುಕ್ಯ ಮಾಂಡಳಿಕರು ಪಾಳಿಧ್ವಜ ಹಾಗೂ ವರಾಹ ಲಾಂಛನವನ್ನು, ಗೋವೆಯ ಕದಂಬರು ವಾನರ ಧ್ವಜವನ್ನು ಹಾಗೂ ಸಿಂಹ ಲಾಂಛನವನ್ನು ಹೊಂದಿದ್ದರು. ರಾಷ್ಟ್ರಕೂಟ ಮಾಂಡಳಿಕರು ಪಾಳಿಧ್ವಜ ಹಾಗೂ ಗರುಡ ಲಾಂಛನವನ್ನು ಹೊಂದಿದ್ದರು. ಹೀಗೆ ವಿವಿಧ ಮಹಾಮಂಡಳೇಶ್ವರರು ವಿವಿಧ ಹಾಗೂ ಲಾಂಛನಗಳನ್ನು ಹೊಂದಿದ್ದರು.

**ಮಹಾಮಂಡಳೇಶ್ವರರಲ್ಲಿ ಮೂರು ವಿಧಗಳಿವೆ.**

೧. ರಾಜವಂಶೀಯ ಮಹಾಮಂಡಳೇಶ್ವರರು : ರಾಜವಂಶದಿಂದ ಬಂದವರು

೨. ಮಹಾಮಂಡಳೇಶ್ವರರ ಮಹಾಮಂಡಳೇಶ್ವರರು : ರಾಜವಂಶೀಯ ಮಹಾಮಂಡಳೇಶ್ವರರಿಗೆ ಅಧೀನರಾಗಿದ್ದಾರೆ.

೩. ಇತರ ಮಹಾಮಂಡಳೇಶ್ವರರು : ಸಣ್ಣ ವಿಭಾಗಕ್ಕೋ ಅಥವಾ ಕೆಲವು ಗ್ರಾಮಗಳಿಗೋ ಮಹಾಮಂಡಲೇಶ್ವರರಾಗಿದ್ದವರನ್ನು ಇತರ ಮಹಾಮಂಡಳೇಶ್ವರರು ಎನ್ನುವರು.

ಈ ಮಹಾಮಂಡಳೇಶ್ವರರನ್ನು ಅಧ್ಯಯನಕ್ಕೊಳಪಡಿಸಿ ಅವರ ಬಿರುದುಗಳನ್ನು ಮಾಡಲಾಗಿದೆ.

**ಪೆರ್ಮಾಡಿ ದೇವರಸರು:**

'ಪೆರ್ಮಾಡಿ' ಇದು ಮೂಲತಃ ಕಂಚಿ ಪಲ್ಲವರು ಧರಿಸುತ್ತಿದ್ದ ಬಿರುದು. ಈ ಬಿರುದನ್ನು ನಂತರ ಗಂಗರು ಧರಿಸಿದರು. ಆರನೇ ವಿಕ್ರಮಾದಿತ್ಯ ಗಂಗರನ್ನು ಸೋಲಿಸಿ ಈ ಬಿರುದನ್ನು ಧರಿಸಿದ. ಕ್ರಮೇಣವಾಗಿ ಈ ಬಿರುದನ್ನು ಮಹಾಮಂಡಳೇಶ್ವರರು ಧರಿಸಿದರು. ನರೇಗಲ್ಲ ಶಾಸನದಲ್ಲಿ[೧೦೦] ಈತನ ಉಲ್ಲೇಖ ಬರುತ್ತದೆ. ಆರನೇ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಯಲಬುರ್ಗಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು. ಇವನಿಗೆ 'ಸಮಧಿಗತ ಪಂಚಮಹಾಶಬ್ಧ ಮಹಾಮಂಡಳೇಶ್ವರ, ಉದಾರವೀರ ಲಕ್ಷ್ಮೀಶ್ವರ । ಸಿನ್ದಕಳ ಕುಮಳ ಮಾರ್ತಾಂಡ। ಮಂಡಳಿಕ ಕುಸುಮ ಕೋದಂಡ । ಸುಖಳಹಯಾ ರೂಢ ಶಿಕ್ಷಾ ವಿಚಲಕ್ಷಣಂ । ಕವಿಗರ್ಮ ವಾದಿವಾಗ್ಮಿ ಜನಸಂಸೋಯಮಾನ । ಗುಣಗನನಿಧಾನ। ಪರಿಪೂರ್ಣಶುಭಲಕ್ಷಣ । ಶಿವಾಗಮ ಸಮಾಕರ್ಣನ ಕರ್ಣ್ನಪೂರ। ಸಕಳ ವಿದ್ವಜ್ಜನಾಧಿರ ಅಪಾರ ಪರಹಿತಚಾರ್ಯ ಅಸಹಾಯ ಶೌರ್ಯ । ನಾನಾ ನಯೋಪಾಯ ನಿಪುಣ ಚಾಣುಕ್ಯ । ಅಚಳತವಾಕ್ಯ । ಶಸ್ತ್ರಶಾಸ್ತ್ರಧಿಸತ್ಕಳಾಪ ಪ್ರವೀಣ ರಣಾಂಗಣಧುರೀಣ ಭೋಗೋಪಭೋಗ ಸಂಕ್ರಂದನ । ಅನುನದಾನರವಿನಂದನ । ಅನೇಕ ವಿಧವಿಧ ದುರ್ಗ ವರ್ಗ ತ್ರಿಣೇತ್ರ । ಆದಿರಾಜ ಚರಿತ್ರ । ಶರಣಾಗತ ವಜ್ರಪಂಜರ। ಮಾಂಡಳಿಕ ದಿಕ್ಕುಂಜರ ಕಾವ್ಯಗೀತ ರಸಾನುಭವ ವಿನೋಧ । ಶ್ರೀ ಮೂಲಸ್ಥಾನದೇವಲಬ್ಧವರ

ಪ್ರಸಾದಾದಿ ನಾಮಾವಳೀ ವಿರಾಜಿತರಪ್ಪ ಶ್ರೀ ಮನ್ಮಮಹಾಮಂಡಳೇಶ್ವರಂ ಎಂದು ಉಲ್ಲೇಖ ಬರುತ್ತದೆ.

ಇವನ ಬಿರುದುಗಳನ್ನು ಗಮನಿಸಿದರೆ ಇವನಿಗೆ ರಾಜಮರ್ಯಾದೆ ಇತ್ತು ಎಂದೂ, ಉದಾರವಾದ ದಾನವನ್ನು ನೀಡುವ ವೀರನಾಗಿದ್ದು, ಕುಸುಮಕೋದಂಡ ಎಂದರೆ ಹೂವಿನ ಬಿಲ್ಲನ್ನುಳ್ಳವನು ಹಾಗೂ ಮಹಾಮಂಡಲೇಶ್ವರರಲ್ಲಿ ಸೂರ್ಯನಂತೆ ಪ್ರಕಾಶಿಸುವವನು, ಕವಿಶ್ರೇಷ್ಠನಾಗಿದ್ದನು ಹಾಗೂ ಚೆನ್ನಾಗಿ ಮಾತನಾಡಬಲ್ಲ ಕಲೆಯನ್ನು ಹೊಂದಿದ್ದನೆಂದು ಮೇಲಿನ ಬಿರುದುಗಳಿಂದ ತಿಳಿಯಬಹುದು. ಶೌರ್ಯ, ಪರಾಕ್ರಮದಲ್ಲಿ ವೀರ ಯೋಧನಾಗಿದ್ದನೆಂದೂ ಉತ್ತಮ ವ್ಯಕ್ತಿತ್ವವನ್ನು ಹೊಂದಿದ ಮಹಾಮಂಡಳೇಶ್ವರನಾಗಿದ್ದಾನೆ.

**ಭೂಲೋಕಮಲ್ಲ ಪೆರ್ಮಾಡಿ:**



ಆರನೇ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾದ ಭೂಲೋಕಮಲ್ಲ ಪೆರ್ಮಾಡಿಯ ಉಲ್ಲೇಖ ಮೊದಲ ಬಾರಿಗೆ ಕ್ರಿ.ಶ. ೧೦೮೩ರ ಸವಡಿ ಶಾಸನದಲ್ಲಿ[೧೧೧] ಕಂಡುಬರುತ್ತಿದ್ದು, ಸಿರಿಯಾದೇವಿ ಹಾಗೂ ಎರಡನೇ ಅಚುಗಿ ಮಗನಾದ ಪೆರ್ಮಾಡಿಯನ್ನು 'ಸಮದಿಗತ ಪಂಚ ಮಹಾಶಬ್ದ ಮಹಾಮಂಡಳೇಸ್ವರ । ವಿರೋಧಿ ಮಾಂಡಳಿಕ ಮಹೇಶ್ವರ ದುಷ್ಟ ಮಾಂಡಳಿಕ ಸುರಭಬೇರುಂಡ । ಪಗೆಮೆಚ್ಚ ಗಂಡ ಶರಣಾಗತ ನೃಪಾಳಸರನಿಧಿ ಸಕಳವಿದ್ಯಾನಿಧಿ । ರಸಗೀತಕೌತುಕ। ಸುಧಾಸಾರಧಾರಂ (ಕರಂ) ರಿಪುಪುರ ತ್ರಿಪುರಗಂಗಾಧರಂ । ನಿಜಕುಳಕುವಳಯಲ ಸುಧಾಕರಂ। ಗಂಭೀರ ವೀರಾಕರಂ । ದೇವದ್ವಿ ಜಗರು ಪೂಜಾ ಸಂತರ್ಪ್ಪಣಂ । ಮಂಡಳಿಕ ಮುಖದರ್ಪಣಂ। ನಿರ್ವಿಕಾರ ಮನಸಿಜಾಕಾರಂ ಪರಾಂಗನಾ ದೂರ । ಚತುಸ್ಸಮಯ ಧರ್ಮ ಧರ್ಮ್ಮನನ್ದನಂ। ಸಕಳವಂದಿಬೃಂದ ರವಿನಂದನಂ । ಸತ್ಯಬೃತಸುರಸರಿ (ತ್ರ) ತನುಂ । ಅಪರಿಮಾನ ಮಾನ ಮಹಿಮಾನಿಧಾನಂ । ದುರ್ದರಾರಾತಿಮದ ನಿವಾರಣ । ನಯ್ಯನಗಂಧವಾರಣ ಭೂಲೋಕಮಲ್ಲ ದೇವ ಪಾದಾರಾಧಕಂ।' ಎಂದು ನಿರೂಪಿಸಿದೆ.

ಪೆರ್ಮಾಡಿಯ ಬಿರುದುಗಳನ್ನು ಗಮನಿಸಿದರೆ ಈತನು ಸಹಿತ ರಾಜಮರ್ಯಾದೆಯನ್ನು ಹೊಂದಿದ್ದು, ವಿರೋಧಿಗಳನ್ನು ಹತ್ತಿಕುವ ಮಾಂಡಳಿಕನಾಗಿದ್ದು, ದುಷ್ಟರನ್ನು ಶಿಕ್ಷಿಸುವಂತನೂ, ವಿದ್ಯೆಯನ್ನು ಬಲ್ಲವನು, ಚತುಸ್ಸಮನಾಗಿದ್ದನೆಂದು ತಿಳಿದುಬರುತ್ತದೆ.

**ಮಾರರಸರು:**

ಕಲ್ಯಾಣ ಚಾಲುಕ್ಯ ದೊರೆ ಒಂದನೇ ಸೋಮೇಶ್ವರನ ಮಹಾಮಂಡಳೇಶ್ವರನಾಗಿ ಮಾರರಸರು ಬೆಳ್ವಲ-೩೦೦ನ್ನು ಸುಕಸಂಖಥಾ ವಿನೋದದಿಂದ ಆಳುತ್ತಿದ್ದರೆಂದು ಕ್ರಿ.ಶ.೧೦೬೪ರ ಗದಗ ಶಾಸನದಿಂದ[೧೧೨] ತಿಳಿಯುತ್ತದೆ. ಒಂದನೇ ಸೋಮೇಶ್ವರನ ಕಾಲದ (ಕ್ರಿ.ಶ. ೧೦೪೪-೧೦೬೮)

ಮುಳಗುಂದ ಶಾಸನದಲ್ಲಿ[೧೧೩] ಮಹಾಮಂಡಳೇಶ್ವರ ಶ್ರೀಮತ ಪೆರ್ಮಾಳರಸರು "ರಾಜಾಧಿರಾಜ ಚೋಳಂಗೊನ್ವಂ" ಮತ್ತು ಮೈಳಲದೇವಿಯ ವೀರಾಗ್ರಣಿ ಎಂಬ ಪ್ರಶಸ್ತಿಯ ಉಲ್ಲೇಖವಿದೆ. ಇವು ಅವನ ಬಿರುದುಗಳಾಗಿವೆ.

**ಆಚರಸ:**

ಕ್ರಿ.ಶ. ೧೧೯೪ರ ಕಳಪ್ಪನಗುಡ್ಡ ಶಾಸನದಲ್ಲಿ[೧೧೦] ಮಂಡಳೇಶ್ವರ ಆಚರಸ ಹಾಗೂ ಇವನ ಮಗ ಬೊಮ್ಮರಸ ಮತ್ತು ಸಿಂಗಮಹೀತಳಪತಿಯ ಉಲ್ಲೇಖದಿಂದ ತಿಳಿದುಬರುತ್ತದೆ. ಈತನ ವಿಷಯವಾಗಿ ಹೇಳಿದ.

ತತ್ವಾದ ಪದ್ಮೋಪಜೀವಿಗಳು ॥ ಮೊನೆಯೊಳುಕೊರ್ಪ್ಪ ತೋೞು
ತ್ತುವನುವರದೊಳು ಬಲದೊಳ ಮರುತುಂ
ತ್ರಿಭುವನಮಲ್ಲನ ಕಟ್ಟಿದಲಗಿನಂತಸದ ಆ
ಚರಸ ಮಂಡಳೇಶ್ವರಂ ಭೂತಳದೊಳು ॥

ಈ ಪದ್ಯದಿಂದ ಈತನ ಪರಾಕ್ರಮದ ಬಗ್ಗೆ ಹಾಗೂ ನಾಲ್ಕನೇ ಸೋಮೇಶ್ವರನಿಗೂ ಮತ್ತು ಆಚರಸನ ನಡುವೆ ಒಳ್ಳೆಯ ಸಂಬಂಧವಿತ್ತೆಂದು ತಿಳಿದುಬರುತ್ತದೆ.

ಪ್ರತಾಪದಿಂದಾಚರಸಂ ॥
ಮೆರವಣಿಯಿಂದೆ ಗೋವೆಯನುಪ್ಪಿನ ಕಟ್ಟೆಯಂ ಪ್ರತಾಪದಿಂದುರಿಸಿ
ಕಳಿಂಗ, ವೆಂಗ ಮೇರುಗುರ್ಜರ, ಮಾಳವ,
ಚೇರ, ಚೋಳ ಭೂಪರನಧಿಪಂಗೆ ಬಿಟ್ಟವೆಸದಿಂ
ನಡೆಮೊಕ್ಕಲೆನಲ್ಕೆ ಮಾಡಿದಾಚರಸನೊ
ಳಂಣ್ಣ ಮತ್ತಳಿದ ಟುಂಟುಕ ಮಾಂಡಳಿಕರ್ಸ್ಗೆ ಮಾನಮೇ ॥

ಈ ಪದ್ಯದಲ್ಲಿ ಆಚರಸನು ತನ್ನ ಪ್ರತಾಪದಿಂದ ಗೋವೆಯ ಉಪ್ಪಿನ ಕಟ್ಟಿಗೆ ಬೆಂಕಿ ಇಟ್ಟು ಕಳಿಂಗ, ಮೇರು, ಗುರ್ಜರ, ಮಾಳವ, ಚೇರ, ಚೋಳರನ್ನು ಹಾಗೂ ಕ್ರೂರ ದುಷ್ಟ ಮಾಂಡಳಿಕರನ್ನು ಬಾಯಿ ತೆರೆಯಲಾರದಂತೆ ಮಾಡಿದನು. ಈತನ ಬಿರುದುಗಳಾದ 'ಭುಜಬಳ ಭೀಮ', 'ಸಾಹಸ ಉತ್ತುಂಗ', 'ಸತ್ಯಾರಾಧೇಯ (ಕರ್ಣ)', 'ನುಡಿದಂತೆ ಗಂಡ', 'ದಾನಗುಣಮಹಿಮ' ಎಂದು ಈ ಬಿರುದುಗಳನ್ನು ಗಮನಿಸಿದರೆ ಆತನು 'ಸಾಹಸಭೀಮ', ಸಾಹಸ ಉತ್ತುಂಗನಾಗಿದ್ದನೆಂದು ಮೇಲಿನ ಪದ್ಯದಿಂದ ತಿಳಿಯಬಹುದು. ಕರ್ಣನಂತೆ ದಾನಗುಣವನ್ನು ಹೊಂದಿದ್ದನೆಂದು ಆತನ ಬಿರುದಿನಿಂದ ತಿಳಿಯಬಹುದು.

**ಮಾರಸಿಂಹ:**

ಕ್ರಿ.ಶ. ೧೦೭೪ರ ನರಗುಂದ ಶಾಸನವು[೧೧೫] ಶಿಲಾಹಾರವಂಶದ ಮಹಾಮಂಡಳೇಶ್ವರ ಮಾರಸಿಂಹನು ಕುಂದಿ-೩೦೦೦, ಮಿರಿಂಜಿ-೩೦೦೦ ಮತ್ತು ಹದಿನೆಂಟು ಹಳ್ಳಿಗಳನ್ನು ಆಳುತ್ತಿದ್ದನೆಂದು ತಿಳಿಸುತ್ತದೆ. ಈ ಶಾಸನದಲ್ಲಿ ಇವನನ್ನು 'ಗೋವಳನ ಸಿಂಘ' ಎಂಬ ಬಿರುದಿನಿಂದ ವರ್ಣಿಸಲಾಗಿದೆ. ಇಲ್ಲಿ ಗೋವಳನು ಎಂಬುದು ಗೋವಾ ಕದಂಬರ ಪ್ರಾಂತ್ಯಾಧಿಕಾರಿ ಗೋವಳದೇವ ಇರಬಹುದು.

**ಅರಿಕೇಸರಿ:**

ಕಾದರವಳ್ಳಿ ೩೦ರ ಮಹಾಮಂಡಳೇಶ್ವರನಾದ ಅರಿಕೇಸರಿಯ ಉಲ್ಲೇಖ ಕಾದರವಳ್ಳಿ[೧೧೬] ಶಾಸನದಲ್ಲಿ ಬರುತ್ತದೆ. ಗಂಗವಂಶದವನಾದ ಈತನು ಚಕ್ರವರ್ತಿ ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯಾದ ಗೋವೆಯ ಕದಂಬ ಗೋವಲದೇವನ ಮಹಾಮಂಡಳೇಸ್ವರನಾಗಿದ್ದಾನೆ. ಶಾಸನದಲ್ಲಿ ಕೋವಳಲಪುರಾವರಾಧೀಶ್ವರ, ಚ್ಚನವತಿಸಹಸ್ರಮಂಡಳಾಧಿನಾಯಕ, ಗಂಗಮಾರ್ತಂಡ, ಪದ್ಮಾವತೀಲಬ್ಧ ವರಪ್ರಸಾದ, ಮೊದಲಾದ ಬಿರುದುಗಳನ್ನು ಧರಿಸಿದ್ದಾನೆ.

**ಪಿಟ್ಟ:**

ಗಂಗವಂಶದ ಮಹಾಮಂಡಳೇಸ್ವರ ಪಿಟ್ಟನು ಯಾವ ಶಾಖೆಗೆ ಸಂಬಂಧಿಸಿದನೆಂದು ತಿಳಿದುಬರುವುದಿಲ್ಲ. ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾದ ಈತನ ಉಲ್ಲೇಖ ಹೂಲಿ ಶಾಸನದಲ್ಲಿ[೧೧೭] ಬರುತ್ತದೆ. 'ಗಂಗಗಾಂಗೇಯ ಚಪಳವೈರಿವಾಹಿನಿ ಸಂವಹನ ಪ್ರತಾಪಲಂಕೇಶ್ವರಂ ಕೋವಳಲಪುರಾಧೀಶ್ವರಂ ಎಂತೆಂದೊಡೆ ಮಂಡಳಿಕ ಜಗದಳಂ ಮಾರ್ಕೇಂಡರ ಜವನರ್ತ್ತಿ ಜನಕೆ ಕಳ್ವಮಹೀಜಂ ಗಂಡರತೀರ್ತ್ಥಂ ಸಿತರಗಗಂಡಂಮಾರ್ಕ್ಕೊಳಭೈರವಂ ಪಿಟ್ಟನೃಪಂ' ಎಂದು ಈತನ ಪ್ರಶಸ್ತಿಯನ್ನು ಹೇಳಲಾಗಿದೆ.

**ತ್ರಿಭುವನ ಮಲ್ಲರಾಯ ಪಾಂಡ್ಯ**

ತ್ರಿಭುವನಮಲ್ಲರಾಯಪಾಂಡ್ಯನ ಉಲ್ಲೇಖ ಕ್ರಿ.ಶ. ೧೦೭೯ ಜನವರಿ ೨೦ ನೀಲ್ಗುಂದ[೧೧೮] ಶಾಸನದಿಂದಲೇ ತಿಳಿದುಬರುತ್ತದೆ. ಅದರಲ್ಲಿ ಈತನು ನೊಳಂಬವಾಡಿ-೩೨೦೦೦, ಕಣೆಯಕಲ್ಲು-೩೦೦ನ್ನು ಆಳುತ್ತಿದ್ದನೆಂದು ಹೇಳಲಾಗಿದೆ. ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯಾದ ಈತನು 'ಕಾಂಚೀಪುರವರಾಧೀಶ್ವರ', 'ಯದುವಂಶಾಂಬರದ್ಯುಮಣಿ', 'ರಾಜಿಗಚೋಳಮನೋಭಂಗ' ಮೊದಲಾದ ಬಿರುದುಗಳನ್ನು ಹೊಂದಿದ್ದನು. ವಿಕ್ರಮಾದಿತ್ಯನ ಜೊತೆಗಿದ್ದುಕೊಂಡು ಚೋಳ ಅರಸನಾದ ರಾಜಿಗಚೋಳನನ್ನು ಯುದ್ಧದಲ್ಲಿ ಸೋಲಿಸಿದ ಕಾರಣ ಇವನಿಗೆ 'ರಾಜಿಗಚೋಳ ಮನೋಭಂಗ'ವೆಂಬ ಗೌರವ ಲಭಿಸಿದ ಅಂಶ ಈ ಬಿರುದಿನಿಂದ ಸ್ಪಷ್ಟವಾಗುತ್ತದೆ.

**ಗೊಂಕರಸ:**

'ಸಿಳಾರ' ವಂಶಕ್ಕೆ ಸೇರಿದ ಈತನ ಉಲ್ಲೇಖ ಬಂದರವಾಡ[೧೧೯] ಶಾಸನದಲ್ಲಿ ಬರುತ್ತದೆ. ಅಲ್ಲಿ ಸಿ x ರ (ಸಿಳಾರ?) ಕುಳಕುಮುದಿನಿ ಎಂದು ಹೇಳಿ ಈತನ ಪ್ರಶಸ್ತಿಯನ್ನು ತಗರಪುರವರಾಧೀಶ್ವರ, ಸುವರ್ಣ ಗರುಡ ಧ್ವಜ, ಬಂಗಾರದ ಧ್ವಜವನ್ನು ಹೊಂದಿದವನು, ವಿಮಳಕೀರ್ತಿ ಧ್ವಜ, ಮನ್ನೆಯಪ್ರಭು, ಭಯಲೋಭ ದೂರ, ಕಾತ್ಯಾಯನಿಲಬ್ಧವರಪ್ರಸಾದ ದಾನ ವಿನೋದ ಎಂದು ಮೊದಲಾಗಿ ಕೊಡಲಾಗಿದೆ. ಈತನು ಸಿಳಾರರ ಯಾವ ಶಾಖೆಗೆ ಸಂಬಂಧಪಟ್ಟವನೆಂದು ತಿಳಿಯುವುದಿಲ್ಲ.

**ನಾಗವರ್ಮರಸ:**

ನಾಗವರ್ಮರಸನು ಕದಂಬ ವಂಶದವನಾಗಿದ್ದಾನೆ. ಕ್ರಿ.ಶ. ೧೦೭೭ ಅಗಸ್ಟ್ ೬ರ ಶಾಸನದಲ್ಲಿ[೧೨೦] ಈತನ ಉಲ್ಲೇಖವು ಬರುತ್ತದೆ. ಬಹುಶಃ ಈತನು ಯುವರಾಜ ಜಯಸಿಂಹನಾಗಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ. ನಾಗವರ್ಮರಸನು ಈ ಜಯಸಿಂಹನ ಮಹಾಮಂಡಳೇಶ್ವರನಾಗಿರಬೇಕು. ಈತನಿಗೆ ಪ್ರತಾಪಲಂಕೇಶ್ವರ, ಬನವಾಸಿ ಪುರವೇಶ್ವರ, ಕದಂಬರಾಭಣ, ವೈರಿಸಂಹರಣ, ತೋಜಿದಡಿಯ ಭೀಮ, ಕಲಿಯುಗರಾಮ, ನವಿಲಿಯಪಾರ್ತ್ಥ, ಮನ್ನೆಯಗೊಡತಿ, ಅಯ್ಯನಸಿಂಘ ಮೊದಲಾದ ಬಿರುದುಗಳನ್ನು ಹೊಂದಿದ್ದಾನೆ.

ಲಂಕೇಶ್ವರ ನಗರಕ್ಕೆ ಬೆಳಕನ್ನು ನೀಡುವವ ಅಥವಾ ಪ್ರಕಾಶಿಸುವವನು ಎಂದು ಪ್ರತಾಪಲಂಕೇಶ್ವರ ಬಿರುದಿನಿಂದ ತಿಳಿಯಬಹುದು. ಬನವಾಸಿಯನ್ನು ಆಳುವವನು ಎಂದು ಬನವಾಸಿ ಪುರವೇಶ್ವರ ಬಿರುದಿನಿಂದ ಹಾಗೂ ಕದಂಬರಿಗೆ ಆಭರಣದಂತಿರುವವನು ಎಂದು ಕದಂಬರಾಭಣ ಬಿರುದಿನಿಂದ, ವೈರಿಗಳನ್ನು ನಾಶಮಾಡುವವನು ಎಂದು, ಕಲಿಯುಗರಾಮನೆಂದು ಹೀಗೆ ಅವನ ಬಿರುದುಗಳನ್ನು ಅರ್ಥೈಸಬಹುದು.

**ಚಟ್ಟಯ್ಯ**

ತಾಮಡಿ ಕಲ್ಲಾಳ[೧೨೧] ಶಾಸನದಲ್ಲಿ ಈತನ ಉಲ್ಲೇಖ ಬರುತ್ತದೆ. ಮಹಾಮಂಡಳೇಶ್ವರ ಕದಂಬ ಕೀರ್ತಿವರ್ಮನ ಸಹೋದರನಾಗಿರುವ ಈತನಿಗೆ ಬನವಾಸಿ ಪುರವರೇಶ್ವರ ಚಂಪಕಾಮೋದ, ರುದ್ರಾವತಾರಿ, ಬಂಧುಜನಾಧಾರ, ಶತ್ರುನಿಕ್ಷೇತ್ರಂ, ಮುಳಿವರಗಂಡ ಮೊದಲಾದ ಪ್ರಶಸ್ತಿಗಳಿವೆ. 'ಚಂಪಕಾಮೋದ' ಬಿರುದನ್ನು ಗಮನಿಸಿದರೆ ಸಂಪಿಗೆ ಹೂವು ತನಗೆ ಪ್ರಿಯವೆಂದು ಅಥವಾ ಸಂಪಿಗೆ ಹೂವಿನ ಸುವಾಸನೆಯಂತೆ ಕೀರ್ತಿ ಹರಡುವವನು, 'ರುದ್ರಾವತಾರ' ಎಂದರೆ ಶಿವನ ಅವತಾರವನ್ನು ಹೊಂದುವವನು, ಅಥವಾ ಯುದ್ಧಭೂಮಿಯಲ್ಲಿ ಭಯಂಕರವಾದ ರೂಪವನ್ನು ಹೊಂದುವವನು ಎಂದರ್ಥ. ಬಂಧು ಜನಾಧಾರ ಜನರ ಸಂಪರ್ಕದಲ್ಲಿದ್ದನು ಅಥವಾ ಜನರನ್ನು ಬಂಧುಗಳಂತೆ ನೋಡಿಕೊಳ್ಳುತ್ತಿದ್ದನು. ಶತ್ರುಗಳನ್ನು ನಾಶಮಾಡುತ್ತಿದ್ದನು, ಯುದ್ಧದಲ್ಲಿ ಪ್ರಚಂಡನಾಗಿದ್ದನು ಹೀಗೆ ಆತನ ಬಿರುದುಗಳ ಅರ್ಥವನ್ನು ವಿವರಿಸಬಹುದು.

**ಕೀರ್ತಿದೇವ–III**

ಕ್ರಿ.ಶ. ೧೧೦೦ ತೆಲಗುಂದ[೧೨] ಶಾಸನದಲ್ಲಿ ಮಹಾಮಂಡಳೇಶ್ವರ ಕೀರ್ತಿದೇವನ ಉಲ್ಲೇಖ ಬರುತ್ತದೆ. ಅಜ್ಜಾದೇವಿವರಲಬ್ಧಪ್ರಸಾದ, ಕದಂಬ ಕಂಠೀರವ, ಮಲೆಗಳ ಕೇಸರಿ ಮೊದಲಾದ ಬಿರುದುಗಳನ್ನು ಹೊಂದಿ ಕೀರ್ತಿವರ್ಮನು ಬನವಾಸಿ–೧೨೦೦೦ನ್ನು ಆಳುತ್ತಿದ್ದನೆಂದು ಇಲ್ಲಿ ಹೇಳಲಾಗಿದೆ. ಈತನು ವಿಕ್ರಮಾದಿತ್ಯನಿಗೆ ಸಹಾಯ ಮಾಡಿದ ಕೀರ್ತಿವರ್ಮನೇ ಆಗಿರಬೇಕೆಂದು ಸಂದೇಹ ಬರುತ್ತದೆ.

ಕದಂಬರಲ್ಲಿ ಸಿಂಹದಂತಿರುವವನು ಎಂದು 'ಕದಂಬ ಕಂಠೀರವ' ಬಿರುದಿನಿಂದ ತಿಳಿಯಬಹುದು. 'ಮಲೆಗಳ ಕೇಸರಿ' ಎಂದರೆ ಗರ್ವಿಸುವ ಸಿಂಹದಂತೆ ಇರುವವನು ಎಂದರ್ಥ.

**ಹರಿಕೇಶ್ವರದೇವ**

ಈತನ ಉಲ್ಲೇಖ ಕ್ರಿ.ಶ. ೧೦೫೫ರ ಡಿಸೆಂಬರ್ ೨೫ರ ಶಾಸನದಲ್ಲಿ[೧೩] ಬರುತ್ತದೆ. ಒಂದನೇ ಸೋಮೇಶ್ವರನು ಚಕ್ರವರ್ತಿಯಾಗಿ, ಈತನ ಪುತ್ರನಾದ ವಿಕ್ರಮಾದಿತ್ಯನು ಯುವರಾಜನಾಗಿ ಗಂಗವಾಡಿ–೯೬೦೦೦, ಬನವಾಸಿ–೧೨೦೦೦ ಆಳುತ್ತಿರುವಾಗ ಈತನ ಕೆಳಗೆ ಮಹಾಮಂಡಳೇಶ್ವರ ಹರಿಕೇಸರಿದೇವನು ಬನವಾಸಿ–೧೨೦೦೦ನ್ನು ಆಳುತ್ತಿದ್ದನು. ಕದಂಬವಂಶದವನಾದ ಈತನ ಪ್ರಶಸ್ತಿ ಶಾಸನದಲ್ಲಿ ಬನವಾಸಿಪುರವೇಶ್ವರ, ತ್ರೈಕಕ್ಷ್ಮಾಸಂಭವವಂ ಚತುರಾಶೀತಿನಗರಾಧಿಷ್ಠಿತ, ಲಲಾಟಲೋಚನ, ಚತುರ್ಭುಜಗದ್ವಿದಿತಾಷ್ಟಾದಶಾಶ್ವಮೇಧ, ಹಿಮವದ್ಗಿರೀಂದ್ರರುಂದ್ರ ಶಿಖರಶಕ್ತಿ ಸಂಸ್ಥಾಪಿತ, ಸ್ಪಟಿಕಶಿಳಾಸ್ತಂಭ, ಕದಂಬ ಚಕ್ರವರ್ತಿ, ಮಯೂರವರ್ಮನ ಕುಲಭೂಷಣ, ಪೆಮ್ಮಟ್ಟಿತೂರ್ಯ್ಯನಿರ್ಗ್ಘೋಶಣ, ಶಾಖಾ ಚರೇಂದ್ರಧ್ವಜ, ಸಿಂಹಾಲಾಂಚ್ಛನ, ಮಾರ್ಕೊಳ್ವರಗಣ್ಡ ಎಂದು ಮುಂತಾಗಿ ಬರುತ್ತದೆ.

**ಬೇಟರಸ–೨:**

ಮಹಾಮಂಡಳೇಶ್ವರನ ಬೇಟರಸನು ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯಾಗಿದ್ದನು. ಕ್ರಿ.ಶ. ೧೦೭೯ ಡಿಸೆಂಬರ್ ೨೬ರ ಹನುಮಕೊಂಡ[೧೪] ಶಾಸನದಲ್ಲಿ "ಶ್ರೀಮಾನ್ವಿಕ್ರಮಚಕ್ರೀ ಶ್ರೀ ಬೇಟಮಂಡಲಿಕೋತ್ತಮಃ" ಎಂದು ಈತನನ್ನು ಕರೆಯಲಾಗಿದೆ. ಮೊದಲನೆಯ ಪೋಲಿಸ್ ಪುತ್ರನಾದ ಇವನು ಕ್ರಿ.ಶ. ೧೦೭೯ ಡಿಸೆಂಬರ್ ೨೬ರಂದು ಬೇಟೇಶ್ವರ ದೇವಾಲಯದಲ್ಲಿನ ಪೋಲೇಶ್ವರ ದೇವರಿಗೆ ನಂದಾದೀವಿಗಾಗಿ ದಾನ ಬಿಡುತ್ತಾನೆ. ಮಹಾಮಂಡಳೇಶ್ವರ ಉಗ್ರವಾಡಿಯ ಮೇಡರಸನು ಮಾಡಿಸಿದ ವೀರಕಮಲ ಜಿನಾಲಯಕ್ಕೆ ಈತನು ದಾನ ಬಿಡುತ್ತಾನೆ. ಬಾಣಾಜಿಪೇಟೆ[೧೫] ಶಾಸನದಲ್ಲಿ ಈತನನ್ನು ಅಮ್ಮಕೊಂಡ ಪುರವರೇಶ್ವರ, ಪರಮಮಹೇಶ್ವರ, ಪತಿಹಿತಚರಿತ,

ವಿನಯವಿಭೂಷಣನೆಂದು ಕರೆಯಲಾಗಿದೆ. ಖಾಜಿಪೇಟೆ[೧೨೫]ಯ ಶಾಸನದಲ್ಲಿ ಅನ್ಮಕೊಂಡ ಪರವರೇಶ್ವರ, ಪರಮಮಹೇಶ್ವರ ಎಂದು ಕರೆದುಕೊಂಡು ಈ ಬೇಟರಸನು ಕಾಳಾಮುಖ ತಪೋಧರನೂ ಶ್ರೀಪರ್ವತದ ಮಲ್ಲಿಕಾರ್ಜುನ ಶಿಲಾಮಠಾಚಾರ್ಯರೂ ಆದ ಪರ್ವತಾವಳಿಯ ರಾಮೇಶ್ವರ ಪಂಡಿತರಿಗೆ ದಾನಬಿಟ್ಟ ಉಲ್ಲೇಖವಿದೆ.

**ಬಿರುದಾವಳಿಗಳು**

ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ಅನೇಕ ಮಹಾಸಾಮಂತರ ಉಲ್ಲೇಖಗಳು ಬರುತ್ತವೆ. ಇವರಲ್ಲಿ ಕೆಲವರು ಹಿಂದೆ ಚಕ್ರವರ್ತಿಗಳಾಗಿದ್ದವರ ವಂಶಕ್ಕೆ ಸೇರಿದ್ದರೆ, ಇನ್ನೂ ಕೆಲವರು ಯಾವುದೇ ರಾಜವಂಶಕ್ಕೆ ಸೇರಿರದ ಮಹಾಸಾಮಂತರಾಗಿದ್ದಾರೆ. ಕದಂಬ, ನೊಳಂಬ, ಪಲ್ಲವ, ಪಾಂಡ್ಯ, ಕಾಕತೀಯ, ಯಾದವ, ಸಿಂಧ ಮತ್ತು ಹಹಿಹಯ ಮುಂತಾದವರು ರಾಜವಂಶಕ್ಕೆ ಸಂಬಂಧಿಸಿದವರು. ಮಹಾಸಾಮಂತರಲ್ಲಿ ಕೆಲವರು ಮಹಾಮಂಡಳೇಶ್ವರರಿಗೆ ಅಧೀನರಾಗಿ ಆಡಳಿತ ನಡೆಸಿದ್ದರೆ, ಮತ್ತೆ ಕೆಲವರು ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕರ ಕೆಳಗೆ ತೆರಿಗೆ ಸಂಗ್ರಹಿಸುವ ಕೆಲಸ ಮಾಡುತ್ತಿದ್ದರು. ಚಕ್ರವರ್ತಿ ಆಹಾವಮಲ್ಲ ಸೋಮೇಶ್ವರನ ಆಡಳಿತವು ವಿಶಾಲ ಭೂಪ್ರದೇಶವನ್ನು ವ್ಯಾಪ್ತಿಸಿದ್ದರಿಂದ ಅನೇಕ ಜನ ಮಹಾಸಾಮಂತರು ಅರಸನ ಅಧೀನದಲ್ಲಿದ್ದರು. ಸಾಮಾನ್ಯವಾಗಿ ಒಬ್ಬ ರಾಜವಂಶೀಯ ಮಹಾಮಂಡಳೇಶ್ವರನ ಕೆಳಗೆ ಇಂಥ ಮಹಾಸಾಮಂತರು ಹೆಚ್ಚು ಸಂಖ್ಯೆಯಲ್ಲಿರುತ್ತಿದ್ದರು. ಆದರೆ ಇವರು ಚಿಕ್ಕ ಅಧಿಕಾರಿಗಳಾಗಿರುವ ಕಾರಣಕ್ಕೆ ಕೆಲವರು ಶಾಸನಗಳಲ್ಲಿ ಉಲ್ಲೇಖಗೊಂಡಿರಕ್ಕಿಲ್ಲ.

ಅರಸರಿಗೆ ಮಾತ್ರವಲ್ಲದೆ ಮಹಾಸಾಮಂತರಿಗೂ ಹಾಗೂ ದಂಡನಾಯಕರಿಗೆ ಮತ್ತು ಯೋಧರಿಗೂ ಬಿರುದುಗಳಿದ್ದವು. ಅವರು ಆಡಳಿತದಲ್ಲಿ ಹಾಗೂ ಯುದ್ಧಗಳಲ್ಲಿ ತೋರಿಸಿದ ಆಸಕ್ತಿ, ವಿಜಯಗಳಿಂದ ಹಾಗೂ ಕಾರ್ಯಗಳಿಂದ ಬಿರುದುಗಳಿಗೆ ಪಾತ್ರರಾಗಿದ್ದಾರೆ. ಅವರ ಬಿರುದುಗಳನ್ನು ಅಧ್ಯಯನಕ್ಕೆ ಒಳಪಡಿಸುವ ಮೂಲಕ ಅಂದಿನ ಕಾಲದ ಸಾಮ್ರಾಜ್ಯ, ವ್ಯಕ್ತಿ, ಪ್ರತಿಭೆ, ಸಾಧನೆ, ಘಟನೆ, ವಿಷಯ ಮೊದಲಾದ ಸಂಗತಿಗಳನ್ನು ಕುರಿತು ವಿವರಿಸುವ ಶಕ್ತಿಯನ್ನು ಹೊಂದಿದೆ. ಈ ಬಿರುದಾವಳಿಗಳು

**ಸೋಬನರಸ**

ಸೋಬನರಸನು ಕಲ್ಯಾಣ ಚಾಲುಕ್ಯ ದೊರೆ ತೈಲಪನ ಕಾಲದಲ್ಲಿ ಮಹಾಸಾಮಂತನಾಗಿದ್ದು, ಸತ್ಯಾಶ್ರಯ ಇರಿವಬೆಡಂಗನ ಆಳ್ವಿಕೆಯಲ್ಲಿಯೂ ಮಹಾಸಾಮಂತನಾಗಿದ್ದನು. ಗದಗ ಜಿಲ್ಲೆಯ ಯಲಿಶಿರೂರು ಶಾಸನದಲ್ಲಿ[೧೨೬] ಈತನ ಉಲ್ಲೇಖವಿದೆ. 'ಕನ್ನನಬಂಟ ಕಟಕ ಪ್ರಕಾರ', ಅಹಮವಲ್ಲದೇವನ ಪಾದಪಂಕಜಭ್ರಮರ' ಎಂಬ ಬಿರುದನ್ನು ಧರಿಸಿದ್ದನು. ಕನ್ನನ ಬಂಟ

ಎಂದರೆ ಸುರಂಗ ಮಾರ್ಗದ ಶೂರನೆಂದು ತಿಳಿಯಬಹುದು. ಕಟಕ ಪ್ರಕಾರ ಎಂದರೆ ನಾನಾಯುದ್ಧ ವಿಶಾರದವನು ಎಂದು ತಿಳಿಯುತ್ತೇವೆ. ಇವನು ಪುಲಿಗೆರೆ-೩೦೦, ಬೆಳ್ವಲ-೩೦೦ ಮತ್ತು ಹಲಸಗಿ-೧೨೦೦೦ ಇವು ಸೋಬನರಸನು ಆಳುತ್ತಿದ್ದ ಭಾಗಗಳು. ಇವನ ಅಧೀನನಾಗಿ ತಿಂಕವನ್ನೆಯ್ಯನು ಶಿರವೂರ, ಸೊರಟೂರ, ಸಬ್ಬಿ (ತಬ್ಬಿ) ಪ್ರದೇಶಗಳ ತೆರಿಗೆಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು.

ಹೊಸೂರು ಶಾಸನವು[೧೨೮] ಸಹಿತ ಮೇಲೆ ಹೇಳಿದ ಬಿರುದುಗಳನ್ನು ಅಷ್ಟೇ ಅಲ್ಲದೆ 'ನೆರೆಮೊಡೆ ಬಂಟ', 'ಗಿರಿದುರ್ಗಮಲ್ಲ', ಕೊಂಕಣ ಭಯಂಕರ ಎಂದು ವರ್ಣಿಸಿದೆ. ಕೊಂಕಣ ಭಯಂಕರ ಎಂದರೆ ಕೊಂಕಣ ದೇಶದವರಿಗೆ ಭಯವನ್ನುಂಟುಮಾಡುವವನು, ಗಿರಿದುರ್ಗಮಲ್ಲ ಎಂದರೆ ಬೆಟ್ಟದ ಮೇಲಿನ ಕೋಟೆಯನ್ನು ಜಯಿಸುವ ಬಲಶಾಲಿ ಅಥವಾ ಬೆಟ್ಟದ ಮೇಲಿನ ಕೋಟೆಯಲ್ಲಿರುವ ಜಟ್ಟಿ ಎಂದರ್ಥ. ನೆರೆಮೊಡೆ ಬಂಟ ಎಂದರೆ ನೆರೆಹೊರೆಯವರಿಗೆ ರಕ್ಷಣೆ ಕೊಡುವ ಯೋಧ ಎಂದು ಹೇಳಬಹುದು. ಇದೇ ಶಾಸನದಲ್ಲಿ ಸಿಂಧವಂಶದ ಮನ್ನೆಯನಾದ ಕೊರಲಗುಂದನು ಸಿಂಧುಕುಳೋದ್ಭವ, ಕುನ್ನಲವಂಶ, ಪ್ರದೀಪಕ, ಪನ್ನಗಧ್ವಜ, ವಿರಾಜಮಾನ, ಅಂದರೆ ಹಾವನ್ನು ಧ್ವಜದಲ್ಲಿ ಹೊಂದಿದವನಾಗಿ ವ್ಯಾಘ್ರ ಲಾಂಛನವನ್ನು ಧರಿಸಿ ಮನ್ನೆಯನಾಗಿ ಮುಳಗುಂದ-೧೨ನ್ನು ಆಳುತ್ತಿದ್ದನೆಂದು ತಿಳಿಸುತ್ತದೆ.[೧೨೯] ಸೋಬನರಸನು ಮುಳಗುಂದದಲ್ಲಿ ಸೊಂಭನೇಶ್ವರ ದೇವಾಲಯವನ್ನು ಕಟ್ಟಿಸಿದನೆಂದು ಮುಳಗುಂದ ಶಾಸನ[೧೩೦] ತಿಳಿಸುತ್ತದೆ.

## ಉದಯಾದಿತ್ಯ

ಉದಯಾದಿತ್ಯನ ಉಲ್ಲೇಖವು ಗಾರೇಹಟ್ಟಿ ಗ್ರಾಮದ[೧೩೧] ಶಾಸನದಲ್ಲಿ ಬರುತ್ತದೆ. ವಿಕ್ರಮಾದಿತ್ಯನ ಪಾದಪದ್ಮೋಪ ಜೀವಿಯಾದ ಈತನು ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯದೇವರು ನೊಳಂಬವಾಡಿ-೩೨೦೦೦ನ್ನು ಆಳುತ್ತಿರುವಾಗ ಅರಹಟ-೧೨, ಜಗಳವುರ-೭೦, ಹಡುವಗೆರೆ-೫೦೦ ಇವುಗಳನ್ನು ಚಿಮ್ಮಚನೂರಿನಲ್ಲದ್ದು ಆಳುತ್ತಿದ್ದ ಉಲ್ಲೇಖವಿದೆ. 'ವಿಜಯ ಲಕ್ಷ್ಮೀಕಾನ್ತಂ', 'ಕೀರ್ತ್ಯಂಗನಾಭರಣಂ', 'ಕೋದಂಡ ಖಾಂಡಾಸಿ ಮಂಡಿತದೋರ್ದ್ದಂಡ ಪ್ರಚಂಡ', 'ಮುನಿವರಗಣ್ಣಂ', 'ದಕ್ಷಿಣ ದಿಶಾವಿಷಯ ಗಡಿಯಂಕಮಲ್ಲಂ', 'ಪರಬಳ ಫಣಿವೈನತೇಯಂ', 'ಸೌಚಗಾಂಗೇಯಂ', 'ನೊಳಂಬನ ಗರುಡಂ', 'ಮಾರ್ತ್ತಣ್ಡದೇವಪಾದಾರಾಧಕಂ' ಮೊದಲಾದ ಬಿರುದುಗಳನ್ನು ಹೊಂದಿದ್ದನು. ಅಲ್ಲದೆ ಚೋಳೇಶ್ವರ ದೇವರ ಲಬ್ಧವರ ಪ್ರಸಾದನಾಗಿದ್ದನು. ಈ ಗಾರೇಹಟ್ಟಿ ಶಾಸನ ಈತನ ಶೌರ್ಯವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದೆ. ಈತನು ಧರ್ಮ ಕಥಾ ಪ್ರಸಂಗದಲ್ಲಿ ಲಿಂಗಪ್ರತಿಷ್ಠೆಯ ಮಹಾತ್ಮೆಯನ್ನು ಕೇಳಿ, ಅದರಿಂದ ಪ್ರೇರೆಪಿತನಾಗಿ ಭಕ್ತಿಯಿಂದ ಚೋಳೇಶ್ವರ ಲಿಂಗಪ್ರತಿಷ್ಠೆ ಮಾಡಿ ಅದಕ್ಕೆ ಕಲ್ಲಿನ ದೇಗುಲವನ್ನು ಮಾಡಿಸುತ್ತಾನೆ. ಈತನ ಬಿರುದುಗಳನ್ನು ನೋಡಿದರೆ ಇವನು ಒಬ್ಬ ವೀರಸಾಮಂತನಾಗಿದ್ದನೆಂದು ತಿಳಿಯುತ್ತದೆ.

## ಶ್ರೀಪಾದರಸ

ಕಲ್ಯಾಣ ಚಾಲುಕ್ಯ ದೊರೆ ಒಂದನೆ ಜಗದೇಕಮಲ್ಲನ (ಕ್ರಿ.ಶ. ೧೦೧೫-೧೦೪೪) ಆಳ್ವಿಕೆಯಲ್ಲಿ ಕೇಶವರಸನ ಮಗ ಸಮಧಿಗತಪಂಚಮಹಾಶಬ್ಧ ಮಹಾಸಾಮಂತಾಧಿಪತಿ, ಶ್ರೀಪಾದರಸನು ಗದಗ ಪ್ರದೇಶದ ಮುಳಗುಂದ-೧೨ನ್ನು ಆಳುತ್ತಿದ್ದನೆಂದು ಹೊಸೂರು ಶಾಸನದಿಂದ[೧೩೧] ತಿಳಿದುಬರುತ್ತದೆ. ಶ್ರೀಪಾದರಸನಿಗೆ ವಾವಣಂಕಕಾರ, ರಣವಿಜಯ ಕಾರಣ, ದಾನವಗಂಧವಾರಣ, ಕೀರ್ತಿಮಾರ್ತಾಂಡ, ಪನ್ನಿರ್ಬರಗಂಡ, ವೈರಿಸಂಹಾರಿ, ಭಯಜನ ಸೂತ್ರಧಾರಿ, ಸಮರ ಜಯಹೇತು ಮನ್ನೆಯಕುಳಧೂಮಕೇತು, ವೀರಶ್ರೀ ಪವಿತ್ರಗಂಡ, ತ್ರಿನೇತ್ರ, ದ್ರೋಹಕಾಳಾನಕ, ತಿಳಿವುಳಬಳಜಳ, ದಿಬಡವಾನಳ, ಕಂಠಿಗದೇವ, ಕರೀಂದ್ರಕಂಠೀರವ, ರಣರಂಗಭೈರವ, ದೋಹಘರಟ್ಟ, ಚೋಲದಂಡದಿಶಾಪಟ್ಟಿ, ಪ್ರಚಂಡರಿಪುಖಂಡನರಿಪುವಧು, ವೈದವ್ಯದೀಕ್ಷಾಪ್ರದ, ರಿಪುರೌದ್ರಾ, ರಿಪುರೌದ್ರಸೂನ, ರಿಪುವರ್ಗಾಭೀಳಕಾಳನಳ, ರಿಪುವೀರ, ರಿಪುಮದೋನ್ಮತ್ತೇವಪಂಚನನ, ರಿಪುವಿದ್ರಾವಣದಾರಣ, ಜಿತರಣ, ಎಂಬ ಅನೇಕ ಬಿರುದುಗಳನ್ನು ಹೊಂದಿದ್ದನೆಂದು ಮುಳಗುಂದ ಶಾಶನ[೧೩೨] ತಿಳಿಸುತ್ತದೆ. ಇವನ ಬಿರುದುಗಳು ಶೌರ್ಯ-ಪರಾಕ್ರಮಗಳನ್ನು ತಿಳಿಸುತ್ತದೆ.

## ಕನ್ನ

ತಿಡಗುಂದಿಯಲ್ಲಿ[೧೩೩] ದೊರೆತ ತಾಮ್ರ ಶಾಸನದಲ್ಲಿ ಈತನ ಉಲ್ಲೇಖ ಬರುತ್ತದೆ. ಚಕ್ರವರ್ತಿ ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯಾಗಿ ಸಿಂದವಂಶದ ಮಂಜನು ಪ್ರತ್ಯಂಡಕ ೪೦೦೦ವನ್ನು ಆಳುತ್ತಿರುವಾಗ ಈತನು ಮಹಾಸಾಮಂತನಾಗಿದ್ದನು. ಶಾಸನದಲ್ಲಿ ಈತನ ಬಿರುದುಗಳನ್ನು ಹೀಗೆ ಕೊಡಲಾಗಿದೆ. 'ವೀರಲಕ್ಷ್ಮೀಕಾಂತ'ಎಂದರೆ ಯುದ್ಧದಲ್ಲಿ ಸಂಪತ್ತನ್ನು ಕೊಳ್ಳೆ ಹೊಡೆಯುವನು 'ವೈರಿಸಾಮಂತ' ಎಂದರೆ ವೈರಿಗಳಿಗೆ ಸಾಮಂತನಾಗಿದ್ದನು. 'ಗಜಕೇಸರಿ' 'ಪರಬಲಕ್ರಿತಾಂಶ' ಎಂದರೆ ಶತ್ರು ಸೈನ್ಯವನ್ನು ನಾಶಮಾಡುವವ, 'ಸಾಮಂತವೆಂಟೀಕಾರ', 'ಬಂಟರಭಾವ', 'ರೇವಣದೇವನಂಕಾರ' 'ತುರುಗರೇವಂತ', 'ಶ್ರೀಮತ್ರಿಭುವನಮಲ್ಲದೇವ ಪಾದಾರಾಧಕ' ಇತ್ಯಾದಿ ಈ ಕನ್ನ ಸಾಮಂತನನ್ನು ಬಿ.ಆರ್. ಗೋಪಾಲರವರು[೧೩೪] ರಟ್ಟವಂಶಕ್ಕೆ ಸೇರಿದ ಕನ್ನಕೈರ-೨ ಎಂದು ಗುರುತಿಸಿದ್ದಾರೆ.

## ಕಲಿಯಮ್ಮರಸ

ಕಲಿಯಮ್ಮರಸನ ಉಲ್ಲೇಖವು ಕೋಳೂರಿನ ಶಾಸನದಲ್ಲಿ[೧೩೫] ಬರುತ್ತದೆ. ಈತನು 'ಜೀಮೂತವಾಹನನ' ವಂಶಕ್ಕೆ ಸೇರಿದವನಾಗಿದ್ದಾನೆ. 'ಪದ್ಮಾವತೀಲಬ್ಧವರ ಪ್ರಸಾದ', 'ತಾಗ್ಯವಿನೋದ', ಮೊದಲಾದ ಬಿರುದುಗಳನ್ನು ಹೊಂದಿದ ಕಲಿಯಮ್ಮರಸನು ಬಾಸವೂರ-

೧೪೦ರ ಮನ್ನೆಯದ ಅರಸುಗೆಯ್ಯುತ್ತಿದ್ದ ಉಲ್ಲೇಖವಿದೆ. ಈತನ ಹೆಂಡತಿ ಲಚ್ಚಲದೇವಿಯಾಗಿದ್ದು, ಮಹಾಸಾಮಂತ ಪೆರ್ಮಾಡಿಯರಸ ಪುತ್ರನಾಗಿದ್ದಾನೆ.[೧೩೬] ಕಾಗಿನೆಲೆಯ ಶಾಸನದಲ್ಲೂ[೧೩೭] ಈತನ ಉಲ್ಲೇಖ ಬರುತ್ತದೆ.

**ಸಿಂಧರ ಭೀಮರಸ**

ಮಹಾಸಾಮಂತ ಸಿಂಧರ ಭೀಮರಸನ ಉಲ್ಲೇಖವು ಒಂದನೆಯ ಸೋಮೇಶ್ವರನ ಆಳ್ವಿಕೆ ಕಾಲದ ಮುಳಗುಂದ[೧೩೮] ಶಾಸನದಲ್ಲಿ ಬರುತ್ತದೆ. ಈ ಶಾಸನದಲ್ಲಿ ಈತನ ಬಿರುದುಗಳನ್ನು ಹೀಗೆ ಕೊಡಲಾಗಿದೆ. 'ಸಮಧಿಗತ ಪಂಚಮಹಾಶಬ್ಧ, ಮಹಾಸಾಮನ್ತವಿಜಯಲಕ್ಷ್ಮೀಕಾಂತ, ಮುಳಗುಂದ ಪುರವರೇಶ್ವರ, ಫಣಿಪತಾಕೇಶ್ವರ ಸಿಂಧ ಕುಲಕಮಳಮಾರ್ತಾಂಡ, ನುಡಿಂತೆಗಂಡ, ಕುನ್ನಲವಂಶಲಲಾಮ, ಗುಣಗಣೋದ್ಧಾಮ, ಕಲಿಗಂಡತೊಡಂ, ಕದನ ಪ್ರಚಂಡ, ರಿಪುನ್ರಿಪಭಯಂಕರಂ, ಸತ್ಯಾರತ್ನಾಕರಂ, ಜನಮನೋರಂಜನ ಚತರು ಚತುರಾನನ, ಭಯಲೋಭವರ್ಜಿತ, ವಿಕ್ರಮೋಪಾರ್ಜ್ಜಿತ, ದಟಿಪ್ಪದುಷ್ಪಾರಾಶಿ ಮದನಿವಾರಣ, ಕಂಚನ ಗಂಧಾವಾರಣ, ಸಹಜಮನೋಜ ಜಯವತ್ಸರಾದ (ಕೊಂಗ) ಮನ್ನೆಯ ಬಂಗಾಱ ಮಾವನಂಕಕಾರ, ಶ್ರೀವಾದಿಮಹಾಪ್ತಳಯಕಾಲ ಭೈರವ ಪಂಡಿತದೇವರ ಪಾಧಾರಾಧಕರಂ, ಎಂಬ ವಿಶೇಷ ಗುಣಗಳಿಂದ ಇವನು ಪ್ರಸಿದ್ಧನಾಗಿದ್ದನೆಂದು ತಿಳಿದುಬರುತ್ತದೆ.

**ಕುರುವರಸ**

ಕುರುವರಸನ ಉಲ್ಲೇಖ ಸೆನೆಗವರಂ[೧೩೯] ಶಾಸನದಲ್ಲಿ ಬರುತ್ತದೆ. ಮಹಾಮಂಡಳೇಶ್ವರನಾದ ಕಾಕತಿಯ ಪೋಳಲರಸರ ಪಾದಪದ್ಮೋಪಜೀಯಾಗಿದ್ದ ಈತನನ್ನು ಶಾಸನದಲ್ಲಿ 'ಸಬ್ಬಿ ಸಹಶ್ರಮುಂ ಸವೆದೋರಮಪಾಲ ಕುಱುವರಸ' ಎಂದು ಕರೆಯಲಾಗಿದೆ. ಇದರಿಂದ ಈತನು ಸಬ್ಬಿ–೧೦೦೦ವನ್ನು ಆಳುತ್ತಿದ್ದನೆಂದು ಗೊತ್ತಾಗುತ್ತದೆ. ಈತನಿಗೆ 'ವಿಜಯ ಲಕ್ಷ್ಮೀಕಾಂತ', 'ಕಾಮಿನೀಕಾಮದೇವ' ಮಱೆವುಗೆ ಕಾವ' ಮೊದಲಾದ ಬಿರುದುಗಳಿದ್ದವು. ಈತನ ಪಾದಪದ್ಮೋಪಜೀವಿಯಾದ ಮಹಾಸಾಮಂತಾಧಿಪತಿ ಮಹಾಪ್ರಚಂಡದಂಡನಾಯಕ ಮಂಡಪರಸನು ದಾನಬಿಟ್ಟ ಉಲ್ಲೇಖವಿದೆ. ಮಂಡಪರಸನಿಗೆ ಬಳಸಿದ ಬಿರುದುಗಳು ಕುರುವರಸನಿಗಿಂತ ಹೆಚ್ಚಿನ ಅಧಿಕಾರವನ್ನು ಸೂಚಿಸುತ್ತದೆ.

**ಅನಂತಪಾಳಯ್ಯ**

ಅನಂತಪಾಳಯ್ಯನು ಆರನೆಯ ವಿಕ್ರಮಾದಿತ್ಯನ ನರೇಗಲ್ಲ ಶಾಸನದಲ್ಲಿ[೧೪೦] 'ಸಮಾಧಿಗತಪಂಚಮಹಾಶಬ್ದ' ಮಹಾಸಾಮಂತಾಧಿಪತಿ, ಮಹಾಪ್ರಚಂಡ ದಂಡನಾಯಕ, ವಿಭುದವರದಾಯಕ, ಸುಜನಪ್ರಸನ್ನ, ನುಡಿದು ಮತ್ತನ್ನ ಗೋತ್ರಪವಿತ್ರ ತುರೆಯರೇವನ್ತ ವೈರಿಕ್ರಿತಾಂತ,

ಸಾಹಸೋತ್ತುಂಗ (ನ್ಯೆ)ಯ್ಯನಸಿಂಗಂ' ಎನ್ನುವ ಬಿರುದುಗಳ ಜೊತೆಗೆ 'ಶ್ರೀಮನ್ಮಾಹಾಪ್ರಧಾನ ಬಾಣಸವೆರ್ಗ್ಗಡೆ ದಂಡನಾಯಕ ಅನಂತಪಾಳಯ್ಯಂಗಳು ಬೆಳ್ವಲ-೩೦೦, ಪುಲಿಗೆರೆ-೩೦೦ ಆಳುತ್ತಮಿರಲು' ಎಂದು ಉಲ್ಲೇಖಿಸುತ್ತದೆ.

ಅನಂತಪಾಳಯ್ಯನು ಸಾಮಂತನಾಗಿ, ದಂಡನಾಯಕನಾಗಿ, ಬಾಣಸವೆರ್ಗ್ಗಡೆ ಅಂದರೆ ಅರಮನೆಯ ಭೋಜನ ವ್ಯವಸ್ಥೆಯ ಅಧಿಕಾರಿಯಾಗಿ ಆರನೇ ವಿಕ್ರಮಾದಿತ್ಯನ ಆಡಳಿತ ವ್ಯವಸ್ಥೆಯಲ್ಲಿ ಪ್ರಮುಖನಾಗಿದ್ದನು. ಆದ್ದರಿಂದ ಆರನೇ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ದೀರ್ಘಕಾಲದವರೆಗೆ ಉನ್ನತ ಹುದ್ದೆಯಲ್ಲಿದ್ದ ಹೆಗ್ಗಳಿಕೆ ಅನಂತಪಾಳಯ್ಯನಿಗೆ ಸಲ್ಲುತ್ತದೆ. ಸುಂಕದ ಅಧಿಕಾರಿಯಾಗಿ, ಮಹಾಸಾಮಂತನಾಗಿ, ಮಹಾಪ್ರಚಂಡ ದಂಡನಾಯಕನಾಗಿ ಚಾಲುಕ್ಯ ಸಾಮ್ರಾಜ್ಯಕ್ಕೆ ಸೇವೆ ಸಲ್ಲಿಸಿದನು.

ಆರನೇ ವಿಕ್ರಮಾದಿತ್ಯನ ಕ್ರಿ.ಶ.೧೦೯೯ ಚಿಕ್ಕಹಂದಿಗೋಳ ಶಾಸನದಲ್ಲಿ[೧೪೧] ಅನಂತಪಾಳಯ್ಯನ ಕಾರ್ಯ ಸಾಹಸದ ಉಲ್ಲೇಖವಿದೆ.

ಎರಗದ ಪರದೇಶಂಗಳ
ನೆಱಗದ ದುರ್ಗಗಳಂ ಸಮದ್ರಂ ಬಿಡಿದಿದ್ದೆ
ದೆಱಗದ ನೃಪರಂ ನಿಜಪತಿ
ಗಱಗಿಸಿದ ನನನ್ತಪಾಳದರ್ಣ್ಣಧೀಶ ।

ತನಗೆ ಎದುರಾದ ಪರದೇಶದವರನ್ನು, ದುರ್ಗಗಳನ್ನು, ಅರಸರನ್ನು ಹಿಡಿದು ನಿಜಪತಿಗೆ ನಮಿಸುವಂತೆ ಮಾಡಿದ ಅನಂತಪಾಲದಂಡಾಧೀಶ. ಹೀಗೆ ಅರಸನ ದಂಡಾಧೀಶನಾಗಿ ಬನಸಿವಾಡ, ಕುಂಟಿನಾಡು, ಬಳಯವಟ್ಟಣದ ಪ್ರದೇಶಗಳನ್ನು ಆಳುತ್ತಿದ್ದನೆಂದು ಈ ಶಾಸನದಲ್ಲಿ ಉಲ್ಲೇಖಿಸಿದೆ. ಇಂತಹ ಪ್ರಭಾವಶಾಲಿ ಸಾಮಂತರಿದ್ದ ಮೂಲಕ ಕಲ್ಯಾಣ ಚಾಲುಕ್ಯರು ವಿಶಾಲವಾದ ಸಾಮ್ರಾಜ್ಯವನ್ನು ಆಳಿದರೆಂದು ಶಾಸನಗಳಿಂದ ತಿಳಿದುಬರುತ್ತದೆ.

**ನೊಟ್ಟಿಘಟ್ಟಿಯಣ**

ಈತನ ಉಲ್ಲೇಖವು ಕುರುವ[೧೪೨] ಗ್ರಾಮದ ಶಾಸನದಲ್ಲಿ ಬರುತ್ತದೆ. ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯಾಗಿ ಮಹಾಮಂಡಳೇಶ್ವರ ತ್ರಿಭುವನಮಲ್ಲ ಗಂಗಪೆರ್ಮಾಡಿ ಆಳುತ್ತಿರುವಾಗ ಈತನು ಮಹಾಸಾಮಂತನಾಗಿದ್ದನು. ಶಾಸನದಲ್ಲಿ ಈತನ ಪ್ರಶಸ್ತಿಯನ್ನು ಹೀಗೆ ಕೊಡಲಾಗಿದೆ. 'ವಿಜಯಲಕ್ಷ್ಮೀಕಾಂತ', 'ವೈರಿಘಟಸರ್ಪ್ಪಂ', 'ನುಡಿದಂತೆ ಗಣ್ಡಂ', 'ಏಕಾಂಗವೀರ', 'ವೀರಾವತಾರ', 'ಮರೆವುಗೆ ಕಾಮ', 'ಪಿಱಿದಿತ್ತು ಮಱಿವ', 'ಪುಸಿಯೆಂಬುದೊಲ್ಲಂ', 'ಭಯಲೋಕಮಲ್ಲ', 'ಕಾಮಿನೀಕಾಮ', 'ಚೋಳಮಾಣಿಕ್ಯಂ', 'ಅಣ್ಣನಸಿಂಗ', 'ವನಗಜಕೇಸರಿ', 'ಸಿವಪಾದಶೇಖರ'

ಇತ್ಯಾದಿ. ಈತನು ಮಂಡಲಿ-೧೦೦೦ದ ಕಂಪಣ ಬೇಲೂರು ಬಳ್ಳಿ-೩೦ರ ಬಾದಕೋಟಿಪುರದಲ್ಲಿ 'ಏಕ ಭೋಗಂ ಗಾವುಣ್ಡಿಕೆಯಂ' ಸುಖದಿಂದ ಆಳುತ್ತಿದ್ದನು.

**ಘಟ್ಟಿಯರಸ**

ಈ ಮಹಾಸಾಮಂತ ಉಲ್ಲೇಖ ಪ್ರಥಮವಾಗಿ ಕ್ರಿ.ಶ. ೧೦೭೧ರ ಹೂವಿನ ಹಡಗಲಿ[೧೪೩] ಶಾಸನದಲ್ಲಿ ಬರುತ್ತದೆ. ಈತನು ಕದಂಬ ಕುಲಕ್ಕೆ ಸಂಬಂಧಿಸಿದವನಾಗಿದ್ದಾನೆ. "ಮಹಾಸಾಮಂತಂ ವೀರಶ್ರೀ ಕಾಂತಂ ಬನವಾಸಿಪುರವೇಶ್ವರಂ ವೀರಮಾಹೇಶ್ವರಂ" ಕದಂಬರಾಭರಣ, ವೈರಿಮದನಿವಾರಣ, ಶ್ರೀಸಾಮನ್ತ ಗರುಡ ಪಾದಪಂಕಜ ಭ್ರಮರ" ಮೊದಲಾದ ಬಿರುದುಗಳನ್ನು ಹೊಂದಿದ್ದನೆಂದು ತಿಳಿದುಬರುತ್ತದೆ.

**ಕೊಂಡಕುಂದೆಯ ಚಂದರಸ**

ಈತನ ಉಲ್ಲೇಖ ಕೊನಕೊಂಡ್ಲ[೧೪೪] ಶಾಸನದಲ್ಲಿ ಬರುತ್ತದೆ. ಚಕ್ರವರ್ತಿಯ ಪಾದಪದ್ಮೋಪಜೀವಿಯಾದ ಮಹಾಮಂಡಳೇಶ್ವರ ಬಲ್ಲಯಚೋಳ ಮಹಾರಾಜ ಸಿಂದವಾಡಿ-೧೦೦೦ವನ್ನು ಆಳುತ್ತಿದ್ದನೆಂದು ಹೇಳಿ ನಂತರ ಮಹಾಮಂಡಳೇಶ್ವರ ಹಾಂಬುಳಿಗೆಯ ಚಿಕ್ಕರಸನನ್ನು ಉಲ್ಲೇಖಿಸಿದ ಮೇಲೆ ಈ ಮಹಾಸಾಮಂತನ ಉಲ್ಲೇಖ ಬರುತ್ತದೆ. ಕಾಸ್ಸಪಗೋತ್ರದವನಾದ ಈತನು 'ಕಲಿಕಾಲಾನ್ವಯ'ನೆಂದು ಹೇಳಿಕೊಂಡಿದ್ದಾನೆ. ಇದರ ನಿಜಪಾಠ 'ಕರಿಕಾಲ' ಇರಬಹುದು. ಹಾಗಿದ್ದ ಪಕ್ಷದಲ್ಲಿ ಈತನು 'ಕರಿಕಾಲ ಚೋಳನ' ವಂಶದವನಾಗುತ್ತಾನೆ. 'ಕಾವೇರಿನಾಥ' 'ಕಂಬಳ ಪಟಿ ಘೋಷಣ', 'ಸಿಖಿಸಿಖಾಧ್ವಜ', 'ಸಿಂಹಲಾಂಛನ', ಒರೆಯೂರ್ಪುರವರೇಶ್ವರ' 'ಚಳದಂಕಕಾಟಿ' ಮೊದಲಾದ ಪ್ರಶಸ್ತಿಗಳನ್ನು ಈತನು ಹೊಂದಿದ್ದನು. ಈ ಚಂದರಸ ಮತ್ತು ಬಮ್ಮರಸರು ದಾನಬಿಟ್ಟ ಉಲ್ಲೇಖ ಕೊನೆಕೊಂಡ್ಲ ಶಾಸನದಲ್ಲಿದೆ. ಇದು ತ್ರುಟಿತವಾಗಿರುವುದರಿಂದ ಯಾರಿಗೆ? ಯಾವುದಕ್ಕೆ ದಾನಬಿಟ್ಟರೆಂದು ತಿಳಿಯುವುದಿಲ್ಲ.

**ಚಟ್ಟಯ್ಯ:**

ಈತನ ಉಲ್ಲೇಖ ಕಡೂರಹಳ್ಳಿ[೧೪೫] ಶಾಸನದಲ್ಲಿ ಬರುತ್ತದೆ. ವಿಕ್ರಮಾದಿತ್ಯ ಪಾದಪದ್ಮೋಪ ಜೀವಿಯಾದ ಮಹಾಮಂಡಳೇಶ್ವರ ತ್ರಿಭುವನಮಲ್ಲ ಪೊಯ್ಸಳದೇವರು ಗಂಗವಾಡಿ-೯೬೦೦೦ವನ್ನು ಆಳುತ್ತಿರುವಾಗ ಈತನ ಪಾದಪದ್ಮೋಪಜೀವಿಯಾದ ಮಹಾಸಾಮಂತ ಚಟ್ಟಯ್ಯನು ಇದ್ದನು. ಶಾಸನದಲ್ಲಿ 'ತ್ರಿಪುರಹರಲಬ್ಧವರಪ್ರಸಾದ', 'ಮೃಗಮದಾಮೊಂದ', 'ಮುಸಿವಸಾಮನ್ತ', 'ಕಂಜಕುಂಜರಂ', 'ಶರಣಾಗತ ವಜ್ರ ಪಂಜರ', 'ಎಱೆಯಂಗದೇವ ಪಾಧಾರಾಧಕ', 'ಅಯ್ಯೂರ್ವರ ಕೋಟೆ' ಮೊದಲಾದ ಪ್ರಶಸ್ತಿಗಳು ಬರುತ್ತವೆ. ಈ ಮಹಾಸಾಮಂತನ ಪಾದಪದ್ಮೋಪಜೀವಿಯಾದ ಕಡವೂರ ಬಸವಗಾವುಂಡನ ಮಗ ಚೆಂದವಗಾವುಣ್ಣನು ಚಂದೇಶ್ವರ ದೇವಾಲಯವನ್ನು ಕಟ್ಟಿಸಿ ೧ ಮತ್ತರು ಗದ್ದೆಯನ್ನು ಬಿಡುತ್ತಾನೆ.

**ಚೋಕರಸ:**

ಸಿರುಗುಪ್ಪ ಶಾಸನದಲ್ಲಿ[೧೪೭] ಈತನ ಉಲ್ಲೇಖ ಬರುತ್ತದೆ. ಚಕ್ರವರ್ತಿ ವಿಕ್ರಮಾದಿತ್ಯನ ರಾಣಿಯಾದ ಪಿರಿಯ ಕೇತಲದೇವಿಯು ಬಲ್ಲಕುಂದೆ-೩೦೦ರಲ್ಲಿಯ ತಕ್ಕೆಕಲ್ಲು-೧೨ರೊಳಗಿರುವ ಭತ್ತ ಗ್ರಾಮವಾದ ಸಿರಗುಪ್ಪೆ, ಕೋಳನೂರು, (ಇನ್ನೊಂದು ಊರಿನ ಹೆಸರಿನ ಭಾಗ ತ್ರುಟಿತವಾಗಿದೆ.) ಈ ಮೂರು ಗ್ರಾಮಗಳನ್ನು ಆಳುತ್ತಿದ್ದಳು. ಸಿರಗುಪ್ಪೆಯ ಕೇತಲೇಶ್ವರ ದೇವರಿಗೆ ಈಕೆ ಭೂಮಿಯನ್ನು ಬಿಟ್ಟ ಉಲ್ಲೇಖವಿದೆ. ಈ ಪಿರಿಯಕೇತಲದೇವಿಯ ಪಾದಪದ್ಮೋಪಜೀವಿಯಾದ ಈತನು ಸಿಂದವಂಶಕ್ಕೆ ಸೇರಿದವನಾಗಿದ್ದಾನೆ. ಶಾಸನದಲ್ಲಿ 'ವಿಜೆಯಲಕ್ಷ್ಮೀಕಾನ್ತಂ', 'ಭೋಗಾವತೀಪುರವರೇಶ್ವರ', 'ಸಿಂದಕುಮೀನ್ವಯ', 'ಸೌಚಾಂಜನೇಯ', 'ನುಡಿದನ್ತೆಗಂಡ', 'ಸತ್ಸಕಾನೀನ', 'ಅಯ್ಯನಸಿಂಗ', ಮೊದಲಾದ ಪ್ರಶಸ್ತಿಗಳು ಇವನಿಗಿವೆ.

**ಜಯಕೇಶಿ:**

ಈತನ ಉಲ್ಲೇಖ ಲಕ್ಷ್ಮೇಶ್ವರ[೧೪೮] ಶಾಸನದಲ್ಲಿ ಬರುತ್ತದೆ. ಭುವನೈಕಮಲ್ಲ ಚಕ್ರವರ್ತಿಯಾಗಿದ್ದಾಗ ಮಹಾಮಂಡಳೇಶ್ವರ ಲಕ್ಷ್ಮರಸನು ಪುಲಿಗೆರೆ-೩೦೦, ಬೆಳ್ವೊಲ-೩೦೦, ಬನವಾಸಿ-೧೨೦೦೦ ಇವುಗಳನ್ನು ಆಳುತ್ತಿದ್ದನು. ಈತನು 'ಮಣಲರಾನ್ವಯ ಪ್ರಸೂತ', 'ಸಿಂಹಲಾಂಛನೆಂದು' ಕರೆಯಲಾಗಿದೆ. 'ಪುರಿಕರಪುರವೇಶ್ವರ', 'ಕದನಮಾಹೇಶ್ವರ', 'ಪ್ರಚಣ್ಡಮಣ್ಡಳಾಗ್ರ', 'ಮಣ್ಣಿತದೋರ್ದಣ್ಣ', 'ಸಗರ ಮಾರ್ತ್ತಣ್ಡ', 'ಕಾಮೀನಿಕಾಮ', 'ಮಣಲರಭೀಮ', 'ತುರಗರೇವನ್ತ', 'ಪರಬಳಕ್ರಿತಾನ್ತ', 'ಸಾಹಸೋತ್ತುಂಗ', 'ಮನ್ನೆಯಸಿಂಗ', ಮೊದಲಾದ ಪ್ರಶಸ್ತಿಗಳನ್ನು ಹೊಂದಿದ ಈತನು ಪುಲಿಗೆರೆ-೩೦೦ಕ್ಕೆ ರಾಷ್ಟ್ರಕೂಟಕನಾಗಿ ಆಳುತ್ತಿದ್ದನು.

ಈತನ ಕಾರ್ಯ ಗುಣಲಕ್ಷಣಗಳನ್ನು ಶಾಸನ ಚೆನ್ನಾಗಿ ಬಣ್ಣಿಸುತ್ತದೆ. ಈತನು ಪುಲಿಗೆರೆಗೆ ಆಗಮಿಸಿ ಅಲ್ಲಿಯ ಜಿನಮಂದಿರಗಳನ್ನು ಭಕ್ತಿಯಿಂದ ಸಂದರ್ಶಿಸಿ ಪೆರ್ಮಾಡಿ ಬಸದಿಗೆ ಬಂದು ತ್ರಿಭುವನಪಂಡಿತರನ್ನು ಕಂಡು ಆ ಬಸದಿಗೆ ಕಿರುದರೆಗಳನ್ನು ಬಿಡುತ್ತಾನೆ.

**೩.೩. ರಾಣಿಯರು**

ಕಲ್ಯಾಣ ಚಾಲುಕ್ಯರ ಆಡಳಿತದಲ್ಲಿ ರಾಣಿಯರ ಪಾತ್ರವು ಪ್ರಮುಖವಾಗಿದೆ. ಅವರು ಅರಸರ ಆಡಳಿತದಲ್ಲಿ ಭಾಗಿಯಾಗುತ್ತಿದ್ದರು. ರಾಜ್ಯದ ಕೇಂದ್ರಬಿಂದುವಾಗಿದ್ದ ಅರಸನ ಅರ್ಧಾಂಗಿನಿಯಾದ ರಾಣಿಗೂ ಸಹ ಆಡಳಿತದಲ್ಲಿ ಸಮಪಾಲು ಹಾಗೂ ಪರಮಗೌರವಿತ್ತು. ಹೀಗೆ ಆಡಳಿತದಲ್ಲಿ ಭಾಗವಹಿಸಿದ ರಾಣಿಯರನ್ನು, ಪತಿಯೊಂದಿಗೆ ಆಡಳಿತ ಮಾಡಿದವರು ಮತ್ತು ಸ್ವತಂತ್ರ್ಯವಾಗಿ ಆಡಳಿತ ಮಾಡಿದವರು ಎಂದು ಎರಡು ವಿಭಾಗಳನ್ನಾಗಿ ಮಾಡಲಾಗಿದೆ. ಸ್ವತಂತ್ರ್ಯವಾಗಿ ಆಳಿದ ರಾಣಿಯರು ಹೆಚ್ಚಾಗಿ ಅಗ್ರಹಾರ ಇಲ್ಲವೆ ತಮ್ಮ ಉಪಜೀವನಕ್ಕಾಗಿ

ಕೊಟ್ಟ ಬಿಡಿಯಾದ ಭತ್ತ ಗ್ರಾಮಗಳನ್ನು ಮಾತ್ರ ಆಳುತ್ತಿದ್ದರು. ಈ ಮಾಹಿತಿಯನ್ನು ಶಾಸನಗಳಲ್ಲಿ ಕಂಡುಬರುವ ಪ್ರಶಸ್ತಿ ಹಾಗೂ ಬಿರುದುಗಳನ್ನು ಗಮನಿಸಿದರೆ ತಿಳಿದುಬರುತ್ತದೆ.

ರಾಣಿಯರು ಸ್ವತಂತ್ರವಾಗಿಯೂ, ದೊಡ್ಡ ವಿಭಾಗಗಳನ್ನು ಆಳುತ್ತಿದ್ದರೆಂದು ಶಾಸನಗಳಲ್ಲಿ ಹಾಗೂ ಬಿರುದುಗಳಲ್ಲಿ ಬರುತ್ತಿದ್ದರೂ, ಅವರು ಸ್ವತಂತ್ರವಾಗಿ ಆಳುತ್ತಿರಲಿಲ್ಲ; ಪತಿಯ ಹೆಸರಿನೊಂದಿಗೆ ಕೇವಲ ಸಾಂಕೇತಿಕವಾಗಿ ಅವರ ಹೆಸರು ಅಲ್ಲಿ ಸೇರಿಕೊಂಡಿರುತ್ತದೆ ಎಂದು ಜೆ.ಎಂ.ನಾಗಯ್ಯ ಅವರು ತಮ್ಮ ಮಹಾಪ್ರಬಂಧವಾದ ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ'ದಲ್ಲಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ಅಭಿಪ್ರಾಯ ಸೂಕ್ತವೆನಿಸುತ್ತದೆ.

ಚೆನ್ನಕ್ಕ ಎಲಿಗಾರ[೮೮] ಅವರು ವಿಕ್ರಮಾದಿತ್ಯನು ತನ್ನ ರಾಣಿಯರಲ್ಲಿ ಸವತಿ ಮತ್ಸರ ಭಾವನೆ ಮೂಡಬಾರದೆಂದು ಅವರನ್ನು ಸಾಧ್ಯವಾದಷ್ಟು ದೂರದಲ್ಲಿಟ್ಟು ರಾಜಕೀಯ ಕಾರ್ಯದಲ್ಲಿ ಅವರನ್ನು ತೊಡಗಿಸಿ ಅಗ್ರಹಾರಗಳಲ್ಲಿ ಇರುವಂತೆ ಮಾಡಿದ್ದಾನೆ ಎಂದಿದ್ದಾರೆ. ಆದರೆ ರಾಣಿಯರು ಅಗ್ರಹಾರಗಳಲ್ಲಿ ಇರಲು ಒಂದು ಪ್ರಮುಖವಾದ ಕಾರಣವೆಂದರೆ ಅಗ್ರಹಾರಗಳೂ ರಾಣಿಯರ ಸುರಕ್ಷಿತ ಸ್ಥಳವಾಗಿದ್ದವೇ ವಿನಃ ರಾಜಕೀಯದತ್ತ ಮನಸ್ಸು ತೊಡಗಿಸಿ ಕಾರ್ಯೋನ್ಮುಖರನ್ನಾಗಿ ಮಾಡುವದಕಲ್ಲ ಮಹಾಮಂಡಳೇಶ್ವರ ಚಲನವಲನಗಳ ಕುರಿತು ರಾಣಿಯರು ರಾಜನಿಗೆ ಗುಪ್ತವಾಗಿ ಮಾಹಿತಿ ನೀಡಲು ರಾಜನು ರಾಣಿಯರಿಗೆ ಅಗ್ರಹಾರ ಆಡಳಿತ ಕೊಡುತ್ತಿದ್ದನು. ಹೀಗೆ ರಾಣಿಯರ ಆಡಳಿತ ಇದ್ದುದು ಸ್ಪಷ್ಟವಾಗುತ್ತದೆ.

**ರಾಣಿಯರ ಬಿರುದಾವಳಿಗಳು**

ಅರಸರಂತೆ ರಾಣಿಯರು ಹಲವಾರು ಪ್ರಶಸ್ತಿಗಳನ್ನು ಹಾಗೂ ಬಿರುದುಗಳನ್ನು ಧರಿಸಿದ್ದಾರೆ. ಸರ್ವೇಸಾಮಾನ್ಯವಾಗಿ ಎಲ್ಲ ರಾಣಿಯರು ವಂಶಪರಂಪರೆಯಾಗಿ ಬಂದ ಬಿರುದುಗಳನ್ನು ಧರಿಸಿ ಅವರು ಕಲಿತ ವಿದ್ಯೆ, ಪ್ರೀತಿಯ ಹೂ, ರಸಿಕಪ್ರಜ್ಞೆ, ಸೌಂದರ್ಯ, ನೃತ್ಯ, ಸಂಗೀತ ಕಲೆಗಳಲ್ಲಿ ಪಾಂಡಿತ್ಯ ಹೊಂದಿದ್ದ ಬಗ್ಗೆ ಬಹುವಿಧವಾಗಿ ವರ್ಣಿಸಿರುವುದ್ನನು ಬಿರುದಾವಳಿಗಳಲ್ಲಿ ಗಮನಿಸಬಹುದು. ಸಾಮಾನ್ಯವಾಗಿ ಎಲ್ಲ ರಾಣಿಯರ ಪ್ರಶಸ್ತಿ ಈ ರೀತಿಯಾಗಿದೆ. "ಸ್ವಸ್ತಿಯನವರತ ಪರಮಕಲ್ಯಾಣಭ್ಯುದಯ ಸಹಸ್ರಫಳಭೋಗಭಾಗಿನೀ ದ್ವಿತೀಯ ಲಕ್ಷ್ಮೀ ಸಮಾನೆ ಕಳಹಂಸಯಾನೆ ಅಗಣ್ಯಾಪುಣ್ಯಲಾವಣ್ಯ ಲೀಲಾಂಕ್ರಿತ ಪರಿವಾರ ಕಲ್ಪಲತೆ....," ಎಂದು ಪ್ರಾರಂಭವಾಗುತ್ತದೆ. ಕೊನೆಯಲ್ಲಿ ರಾಣಿಯರು ತಮ್ಮ ಪತಿಯ ಹೆಸರನ್ನು ಹೇಳಿ ಅವನ "ವಿಶಾಳವಕ್ಷಸ್ಥಳ ನಿವಾಸಿನಿಯರಪ್ಪ" ಎಂದು ರಾಣಿಯ ಹೆಸರನ್ನು ಹೇಳಲಾಗುತ್ತದೆ.

ರಾಜಮನೆತನಗಳ ಮಹಿಳೆಯರಿಗೆ ವಿದ್ಯೆಯು ರಾಜಕುಮಾರರಿಗೆ ದೊರೆಯಬಹುದಾದ ಮಟ್ಟದಲ್ಲಿ ದೊರಕುತ್ತಿರಲಿಲ್ಲ. ಬೇಕಿದ್ದರೆ ಸಂಗೀತ ನೃತ್ಯಗಳಂತಹ ಕಲೆಯ ತರಬೇತಿಯು

ಅವಳಿಗೆ ದೊರೆಯುತ್ತಿದ್ದಂತೆ ಕಾಣುತ್ತದೆ. ತಮ್ಮ ರಾಜರ ಮನಸೆಳೆಯುವುದಕ್ಕಾಗಿ ಇವುಗಳನ್ನು ಕಲಿಯುತ್ತಿರಬಹುದು. ಈ ವಿಷಯವಾಗಿ ನೇರವಾದ ಉಲ್ಲೇಖಗಳಿಲ್ಲದಿದ್ದರೂ, ಪ್ರಾಚೀನ ಕರ್ನಾಟಕದ ರಾಣಿಯರು ಹೊಂದಿರುವ ಬಿರುದು ವಿಶೇಷಣಗಳಿಂದ ತಿಳಿಯಬಹುದಾಗಿದೆ. ಅಂತವರಲ್ಲಿ ಪ್ರಮುಖರಾದವರೆಂದರೆ.

### ಸುಗ್ಗಲದೇವಿ

ಚಾಲುಕ್ಯ ಜಗದೇಕಮಲ್ಲದೇವನ ಮಡದಿ ಸುಗ್ಗಲದೇವಿ ಸರ್ವೆ ಸಾಮಾನ್ಯವಾಗಿರುವ ಎಲ್ಲ ಪ್ರಶಸ್ತಿಗಳನ್ನು ಹೊಂದಿದ್ದಾಳೆ. 'ಕಲಿಕಾಲ ಸರಸ್ವತಿ' ನೃತ್ಯದಲ್ಲಿ ಪಾಂಡಿತ್ಯವನ್ನು ಹೊಂದಿದ್ದವಳು, 'ರೂಪವಿದ್ಯಾಧರಿ' ಸುಂದರವತಿಯಾಗಿದ್ದಳು ಎಂದರ್ಥ. ಈ ತೆರನಾದ ಬಿರುದುಗಳನ್ನು ಹೊಂದಿದ್ದಳು. ಈಕೆಯನ್ನು ದೇವೂರಿನ ಕ್ರಿ.ಶ.೧೦೨೯ ರ ಶಾಸನವು

ದ್ವಿತೀಯ ಲಕ್ಷ್ಮೀ ವಿಶಿಷ್ಟಜನ ಕಾಮಧೇನು ಆಶ್ರಿತ
ಆನ ಕಲ್ಪಲತೆ ರೂಪವಿದ್ಯಾದರಿ ಕಲಿಕಾಲ ಸರಸ್ವತಿ"[೧೨೯]

ಎಂದಿದೆ. ಸುಗ್ಗಲದೇವಿಯ ಮೇಲಿನ ಬಿರುದುಗಳನ್ನು ಗಮನಿಸಿದರೆ ಇವಳ ಕಲಾಪ್ರೌಢಿಮೆಯು ಅರ್ಥವಾಗುತ್ತದೆ.

### ಮೈಳಲದೇವಿ

ಚಾಳುಕ್ಯ ತ್ರೈಲೋಕ್ಯಮಲ್ಲನ ಮಡವಿ ಮೈಳಲದೇವಿ 'ಸವತಿ ಮದಭಂಜನೆ'[೧೩೦] ಎಂಬ ಬಿರುದು ಧರಿಸಿದ್ದು ಎಂದರೆ ಸವತಿಯರ ಬಗ್ಗೆ ಇದ್ದ ದರ್ಪವನ್ನು ತಿಳಿಸುತ್ತದೆ. ನಮಸ್ತಾನ್ತಪುರ ಮುಖಮಣ್ಣನೆ[೧೩೧] ಎಂಬ ಬಿರುದುಗಳನ್ನು ಧರಿಸಿದ್ದಾರೆ. ವಿಶಾಲ ವಿಧ್ಯಾಧರಿ,[೧೩೨] ಎಂದರೆ ವಿದ್ಯೆಯಲ್ಲಿ ಹಿರಿಮೆಯನ್ನು ಹೊಂದಿದವಳು. ಈ ಬಿರುದುಗಳನ್ನು ಗಮನಿಸಿದರೆ ರಾಣಿಯರಲ್ಲಿ 'ಸವತಿಮತ್ಸರ' ಶಾಸನಗಳಲ್ಲಿ ಪದೇ ಪದೇ ಉಲ್ಲೇಖವಾಗಿದೆ. ಕಿರಿಯ ರಾಣಿಯರನ್ನು ಹಿರಿಯ ರಾಣಿ ಅಂದು ಕಟ್ಟುನಿರ್ಬಂಧನೆಯಲ್ಲಿಡಲು ಶ್ರಮಿಸುತ್ತಿದ್ದುದುಂಟು.

### ಚಂದಲದೇವಿ

ತ್ರಿಭುವನಮಲ್ಲನ ಮಡದಿ ಚಂದಲದೇವಿ 'ದುಷ್ಟದರ್ಪಿಷ್ಟ ಸವತಿ ಶಿರೋವಜ್ರಮುಷ್ಠಿ'[೧೩೩] ಎಂಬ ಬಿರುದನ್ನು ಹೊಂದಿದ್ದಳು. ಸವತಿಯರ ಬಗ್ಗೆ ಇದ್ದ ದರ್ಪವನ್ನು ತೋರಿಸುತ್ತಿದ್ದಳು.

### ಕುಂದಲದೇವಿ

ಚಾಲುಕ್ಯ ಇರಿವಬೆಡಂಗನ ಮಗ ಕುಂದರಾಜನ ಮಡದಿ ಕುಂದಲದೇವಿಯು 'ಪೆರ್ಮಾತಿನ ಸವತಿಯರ ಬೆನ್ನಚಮ್ಮಡಿಕೆ'[೧೩೪] ಸವತಿಯನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವವಳು. 'ಸವತಿತಳ

ಪ್ರಹಾರಿ' ಎಂದರೆ ಸವತಿಯರ ಮೇಲೆ ದಾಳಿ ಮಾಡುತ್ತಿದ್ದಳು. 'ಸವತಿಗಜಕೇಸರಿ'[೧೫೪] ಆನೆ, ಸಿಂಹ, ಕುದುರೆಗಳನ್ನು ಹೊಂದಿದವಳು, ಎಂಬ ಬಿರುದುಗಳನ್ನು ಹೊಂದಿದ್ದಳು.

## ಅಭಿನವಕೇತಲ ಮಹಾದೇವಿ

ಚಾಲುಕ್ಯ ದೊರೆ ರಾಜ ತ್ರಿಭುವನಮಲ್ಲ ದೇವನ ಪತ್ನಿ ಕೇತಲದೇವಿಯನ್ನು 'ಶ್ರೀಮದಭಿನವ ಸರಸ್ವತಿ ಹಿರಿಯ ಕೇತಲದೇವಿಯರು' ಎಂದು ಬಣ್ಣಿಸಲಾಗಿದೆ.[೧೫೬] 'ಶ್ರೀಮದಭಿನವ ಸರಸ್ವತಿ', 'ಸವತಿಮೃಗ ಶಾರ್ದೂಳೆ'[೧೫೭] ಎಂಬ ಬಿರುದನ್ನು ಹೊಂದಿದ್ದಾಳೆ. ಶ್ರೀಮದಭಿನವ ಸರಸ್ವತಿ ಎಂಬ ಬಿರುದು ನೃತ್ಯ ಅಭಿನಯ ಮತ್ತು ನಾಟ್ಯದಲ್ಲಿ ಉತ್ಕೃಷ್ಟವಾದ ಪಾಂಡಿತ್ಯವನ್ನು ಹೊಂದಿದವರಿಗೆ ಮಾತ್ರ ಸಲ್ಲುವಂತಹ ಬಿರುದಾಗಿತ್ತು. (ಇಂದಿಗೂ ಈ ರೀತಿಯ ಬಿರುದಿಗೆ ಅದೇ ಮಾನ್ಯತೆ ಇದೆ.) ಅನೇಕ ಶಾಸನಗಳಲ್ಲಿ ಕೇತಲದೇವಿಯರು ದೇವಾಲಯಗಳನ್ನು ನಿರ್ಮಿಸಿ, ಅಲ್ಲಿನ ರಂಗಭೋಗಕ್ಕಾಗಿ, ಕಲಾವಿದರಿಗಾಗಿ ದಾನದತ್ತಿ ನೀಡಿರುವ ನಿದರ್ಶನ ದೊರೆಯುತ್ತದೆ.

## ಬಾಚಲದೇವಿ

ಪೆರ್ಮಾಡಿದೇವನ ಪತ್ನಿ ಬಾಚಲದೇವಿಯರನ್ನು ಒಂದು ಶಾಸನದಲ್ಲಿ 'ಅರಿಬಿರುದ ಪಾತ್ರ ಜಗದಳೆ' ಎಂದೂ ನೃತ್ಯವಿದ್ಯಾ ಪ್ರಭಾವ ಪ್ರಭೂತ ನಿರ್ಮಳ ಯಶೋವಿಭಾಸಿನಿ. ಸ್ನಾನ ಪಾತ್ರ ಮುಖನಣ್ದನೆ ಪ್ರತಿ ಪಕ್ಷಗಾಯಕಾಗಾನ ಎಂದೂ....... 'ಚತುರ ವಿನೋದೆ' ಎಂಬ ಬಿರುದಗಳಿಂದ ವರ್ಣಿಸಲಾಗಿದೆ. ಅವಳ ಕೀರ್ತಿರಾಗವನ್ನು ಹಾಡುತ್ತಿದ್ದ ಕಲಾವಿದೆಯರಿಗೆ ದಣಿವು ಎಂಬುದು ತಿಳಿದಿರಲಿಲ್ಲವೆಂಬ ಉತ್ಪ್ರೇಕ್ಷೆಯ ವಿವರಣೆಯನ್ನು ಕಾಣುತ್ತೇವೆ. ಒಟ್ಟಿನಲ್ಲಿ ಬಾಚಲದೇವಿ ಸಂಗೀತ ನೃತ್ಯಕಲೆಗಳಲ್ಲಿ ಒಳ್ಳೆಯ ಪ್ರಖ್ಯಾತಿಯನ್ನು ಹೊಂದಿದ್ದವಳೆಂದೂ ಆಕೆಗೆ 'ಪಾತ್ರಜಗದಳೆ' ಎಂಬ ಬಿರುದು ಇರುವುದೂ ಆಲಹಳ್ಳಿ ಶಾಸನದಿಂದ ತಿಳಿದುಬರುತ್ತದೆ.[೧೫೮]

## ಲಚ್ಚಲದೇವಿ

ಒಂದನೇ ಸೋಮೇಶ್ವರನ ವಾಡದಿ 'ಸಂಗೀತ ಪ್ರಸಂಗ ವಿವೇಕ ಚೂಡಾಮಣಿ' ಎಂಬ ಬಿರುದನ್ನು ಹೊಂದಿದ್ದಳು. ಇದರಿಂದ ತಿಳಿದುವುದೇನೆಂದರೆ ಸಂಗೀತದಲ್ಲಿ ಪರಣತಿಯನ್ನು ಹೊಂದಿದ್ದಳು. ಶಿಕಾರಿಪುರ ಶಾಸನದಲ್ಲಿ ಇದು ದೊರಕುತ್ತದೆ.[೧೫೯] ಶಾಸನವು ಬಹಳ ತ್ರುಟಿತವಾಗಿದ್ದರೂ ನೃತ್ಯಕ್ಕೆ ಆ ಕಾಲದ ನೃತ್ಯಶೈಲಿಯ ಬಗ್ಗೆ ಅನೇಕ ಮಾಹಿತಿಗಳನ್ನೊದಗಿಸುವ ಬಹುಮುಖ್ಯ ಶಾಸನವಾಗಿದೆ.

## ಕಂಚಲಮಾಹಾದೇವಿ

ಚಾಲುಕ್ಯ ಭುವನೇಕಮಲ್ಲನ ಮಡದಿ 'ಶ್ರೀಂಗಾರ ವಿದ್ಯಾಧರಿ' ಎಂಬ ಬಿರುದಿನಿಂದ ತಿಳಿಯುವುದು. ಇವಳು ಶ್ರೀಂಗಾರ ಪ್ರಿಯಳಾಗಿದ್ದಳು, ಸುಂದರವತೆಯಾಗಿದ್ದಳು, ಸಕಳಕಳಾಧರಿ.[೧೬೦]

ಅಭಿನವಸರಸ್ವತಿ ಎಂಬ ಬಿರುದುಗಳನ್ನು ಹೊಂದಿದ್ದಾಳೆ. ಈ ಬಿರುದುಗಳನ್ನು ಗಮನಿಸಿದರೆ ಕಂಚಲಮಹಾದೇವಿಯು ಎಲ್ಲ ವಿದ್ಯೆಗಳಲ್ಲಿ ಹಾಗೂ ನೃತ್ಯ ಪಾಂಡಿತ್ಯವನ್ನು ಹೊಂದಿದ್ದಳೆಂದು ತಿಳಿಯುತ್ತದೆ.

**ಚಂದಲದೇವಿ**

ಮೂರನೇ ಸೋಮೇಶ್ವರನ ತಾಯಿಯನ್ನು ಶಾಸನಗಳಲ್ಲಿ ಚಂದಲದೇವಿ ಎಂದು ಕರೆಯಲಾಗಿದೆ. ಕ್ರಿ.ಶ.೧೦೮೨ ರ ಆಳಂದ,[೧೬] ಶಾಸನವೇ ಈಕೆಯ ಉಪಲಬ್ಧ ಪ್ರಥಮ ಶಾಸನವಾಗಿದೆ. ಈಕೆ ವಿಕ್ರಮಾದಿತ್ಯನನ್ನು ಮೆಚ್ಚಿ ಅವನನ್ನೇ ಆರಿಸಿಕೊಂಡು ಮದುವೆಯಾದ ವಿಕ್ರಮಾದಿತ್ಯನ ಪ್ರಿಯರಾಣಿಯೂ ಆಗಿದ್ದು ಬಿಲ್ಹಣನ 'ವಿಕ್ರಮಾಂಕದೇವಚರಿತಂ' ಕಾವ್ಯದಲ್ಲಿ ಈಕೆಯನ್ನು 'ಚಂದ್ರಲೇಖಾ' ಎಂದು ಕರೆದಿದ್ದಾನೆ.

ಚಂದಲದೇವಿಯ ವಿವಿಧ ಪ್ರಶಸ್ತಿಗಳನ್ನು ಶಾಸನಗಳಲ್ಲಿ ಹೀಗೆ ಹೇಳಲಾಗಿದೆ. ಹುಣಸಿಹಡಗಲಿ ಶಾಸನದಲ್ಲಿ[೧೭] ಸ್ವಸ್ತ್ಯನವರತ ಪರಮ ಕಲ್ಯಾಣಾಭ್ಯುದಯ ಸಹಸ್ರಫಳಭೋಗ ಭಾಗಿನಿ (।*) ದ್ವಿತೀಯ ಲಕ್ಷ್ಮೀ ಸಮಾನೆ ಕಳಹಂಸಯಾನೆ। ರಾಯಝುಳಪ್ಪ ಕವ್ವಿ(ಳ್ವ) ಕುಜಸಮಾಲಂಗಿತ ಕಲ್ಪಲತೆ ಸಾಮಂತಸೀಮಂತಿನೀ ಪರಿವೃತೆ। ದುಷ್ಟ ದರ್ಪಿಷ್ಟ ಸವತೀ ಶಿರೋವಜ್ರಮುಷ್ಟಿ ದೀನಾನಾಥಕಥಕ ವೈತಾಳಿಕ ಸುವರ್ಣವೃಷ್ಟಿಚಿಂದಿಚಿಂತಾಮಣಿ ಅಂತಹಿವರ ಚೂಡಾಮಣಿ ಮಲಪವಿದ್ಯಾಧರೀ, ಸಕಳಕಳಾಧರಿ, ರಾಯಮನೋಜರಾಜರಲಿ, ಅಡಬಳ ಸರಸ್ವತಿ, ನೃತ್ಯವಿದ್ಯಾಧರಿ, ಸಸ್ತಿಗಜಕೇಸರಿ, ಕಲಿಕಾಲ ಸರಸ್ವತಿ ಶ್ರೀ ಮತ್ತ್ರಿಭುವನಮಲ್ಲದೇವ ವಿಶಾಳವೃಕಸ್ಥಳ ನಿವಾನಿಸಿನಿಯರಪ್ಪ ಶ್ರೀಮತ್ಸಿರಿಯರಸಿ ಚನ್ದಲ ದೇವಿಯರು ಹೇಳಿದೆ. ಅಳಂದ ಶಾಸನವು[೧೮] ಇದೆ ತೆರನಾದ ಪ್ರಶಸ್ತಿಯನ್ನು ಹೊಂದಿದ್ದು ಅದರಲ್ಲಿ 'ದುಷ್ಟದರ್ಪಿಷ್ಟ ಸವತಿ ಶಿರೋವಜ್ರಮುಷ್ಟಿ ಎಂಬ ಬಿರುದುಗಳನ್ನು ಧರಿಸಿದ್ದಾಳೆ. 'ನೃತ್ಯವಿಧ್ಯಾಧರಿ' ಎಂಬ ಬಿರುದಿನಿಂದ ಈಕೆಯು ಶ್ರೇಷ್ಠ ದರ್ಜೆಯ ನೃತ್ಯಗಾರ್ತಿಯಾಗಿದ್ದಳೆಂಬುದು ತಿಳಿದುಬರುತ್ತದೆ. ಅಲ್ಲದೆ ಈಕೆಯು ಇತರ ಕಲೆಗಳಲ್ಲಿಯೂ ಪರಣಿತಳಾಗಿದ್ದಳು. 'ಸತಿಶಿರೋವಜ್ರಮುಷ್ಟಿ' ಎಂಬ ಬಿರುದು ಸವತಿಯರ ಬಗ್ಗೆ ಇವಳದ್ದ ದರ್ಪವನ್ನು ಸೂಚಿಸುತ್ತದೆ. 'ಗೌರೀಪದಾಂಬುಜಾರಾಧಕಿ' ಎಂಬ ಬಿರುದು ಈಕೆ ಗೌರಿ ಭಕ್ತೆಯೆಂಬುದನ್ನು ಸೂಚಿಸುತ್ತಿರಬಹುದು. ಹೀಗಾಗಿ ಚಲುವೆಯಾದ ಈಕೆ ವಿಕ್ರಮಾದಿತ್ಯನ ಪ್ರಿಯರಾಣಿಯಾಗಿರುವಲ್ಲಿ ಸಂದೇಹವೇ ಇಲ್ಲ ಎಂದು ಹೇಳಬಹುದು. ಈಕೆಗೆ 'ಅಭಿನವಸರಸ್ವತೀ' ಎಂಬ ಬಿರುದು ಇದ್ದಿತು. ಶಾರಾದಾ ಮತ್ತು ಸರಸ್ವತೀ ಇವು ಪರ್ಯಾಯ ಪದಗಳಾಗಿವೆ.

**ಪದ್ಮಲದೇವಿ**

ಪದ್ಮಲದೇವಿಯ ನೇರ ಉಲ್ಲೇಖ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ರಂಗಾಪುರಂ[೧೯]

ಶಾಸನದಲ್ಲಿ ಬರುತ್ತದೆ. ಇದರಿಂದ ಪದ್ಮಲದೇವಿಯು ಈ ಭಾಗದವಳಾಗಿರಬೇಕು. ಈಕೆಯು ಬಿರುದುಗಳನ್ನು ಶಾಸನಗಳಲ್ಲಿ ಈ ಕೆಳಗಿನಂತೆ ನೋಡಲಾಗಿದೆ.

"ಸ್ವಸ್ತಿಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗಭಾಗಿನೀ ದ್ವಿತೀಯಲಕ್ಷ್ಮೀ ಸಮಾನೆ ಕಳಹಂಸಯಾನೆ ಅಗಣ್ಯಪುಣ್ಯಲಾಯಣ್ಯ ಲೀಲಾಲಂಕ್ರಿತ ಪರಿವಾರಕಲ್ಪಲತೆ ಅರ್ತ್ಥಿಜನ ಚಿಂತಾಮಣಿ, ಗೋತ್ರಚೂಡಾಮಣಿ, ಪ್ರತ್ಯಕ್ಷ ಪಾರ್ವ್ವತಿ ಪತಿಬ್ರತಾರುಂಧತಿ ಅಭಿನವಸರಸ್ವತಿ, ರೂಪವಿದ್ಯಾಧರಿ, ಸಕಳಕಳಾಧರಿ, ಮಹಾಲಕ್ಷ್ಮೀದೇವೀ ಲಬ್ಧ ವರಪ್ರಸಾದೆ, ದಾನವಿನೋದೆ, ಶ್ರೀಮತ್ರಿಭುವನಮಲ್ಲ ದೇವವಿಶಾಳವಕ್ಷಸ್ಥಳನಿವಾಸಿನಿಯರಪ್ಪ ಶ್ರೀಮತು ಪದ್ಮಲದೇವಿಯರು" ಎಂದು ಹೇಳಲಾಗಿದೆ.

ಪದ್ಮಲದೇವಿ ಬಿರುದುಗಳನ್ನು ಗಮನಿಸಿದರೆ ಈಕೆಯು ಎಲ್ಲದರಲ್ಲೂ ಪಾಂಡಿತ್ಯವನ್ನು ಪಡೆದಿದ್ದಳು. ದಾನಗುಣವನ್ನು ಹೊಂದಿದ್ದಳು. ನಾರಸಿಂಘ ದೇವರಿಗೆ ಸ್ನಾನನೋವೇದ್ಯ, ಅಂಗಭೋಗಕ್ಕೆ ಭೂಮಿಯನ್ನು ದಾನ ಬಿಡುತ್ತಾಳೆ. ಬಹುಶಃ ಯುವರಾಜನಾಗಿದ್ದಾಗಲೆ ಪದ್ಮಲದೇವಿಯನ್ನು ವಿಕ್ರಮಾದಿತ್ಯನು ವಿವಾಹವಾಗಿರಬೇಕು.

### ಲಕ್ಷ್ಮಾದೇವಿ

ಮೊಟ್ಟ ಮೊದಲಿಗೆ 'ಪಿರಿಯರಸಿ' ಎಂದು ಕರೆಯಿಸಿಕೊಂಡವಳೇ ಈ ಲಕ್ಷ್ಮಾದೇವಿ ಜನಪ್ರಿಯಾಳೂ, ಧಾರ್ಮಿಕ ಮನೋಭಾವದವಳೂ ಆದ ಈಕೆಯನ್ನು ಶಾಸನಗಳು, ಹರಿಹರಾದಿ ಕವಿಗಲೂ ವರ್ಣಿಸಿದ್ದಾರೆ. ವಿಕ್ರಮಾದಿತ್ಯನ ಜೀವಮಾನದ ಮೊದಲ ದಿನಗಳಲ್ಲಿ ವರಸಿದ ರಾಣಿಯರಲ್ಲಿ ಒಬ್ಬಳಾಗಿದ್ದಾಳೆ. ಸೂಡಿ ಶಾಸನದಲ್ಲಿ[14] ಈಕೆಯ ಬಿರುದುಗಳನ್ನು "ತನ್ಮನೋವಲ್ಲಭೆ ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಶ್ರ(ಸ್ರ) ಫಳಭೋಗಭಾಗಿನಿ ಸಂಸಾರಸಾರ ಸ್ವಸ್ತಿಸಂಪದಾ ಭೋಗಿನಿ ರಾಯನಾರಾಯಣ ವಿಶಾಳವಕ್ಷ(ಸ್ಥ)ಳ ಸ್ಥಹಿತ ಪ್ರತ್ಯಕ್ಷಲಕ್ಷ್ಮೀ ಯೌ(ವನನ)ವಸನ್ತಲಕ್ಷ್ಮಿ ಸಕಳಕಳಾ ಪಲೀಳಾಧ(ರೆ) ವಿಳಾಸವಿದ್ಯಾಧರೆ ವಿಕ್ರಮಾದಿತ್ಯದೇವ ಮನೋರಂಜಿನಿ ಸ್ವಸ್ತಿಮದಭಂಜನಿ (ಸವತಿ ಮದಭಂಜನಿ?) ಚಾಳುಕ್ಯರಾಮಹೃದಯಹಸೋತ್ಕರ್ಷೆ ಸನ್ತತಾನರ್ಘ್ಯ ಮಣಿಕನಕಂಕಣ ವರ್ಷೆ ನಿತ್ಯಪ(ಲಿ)ಯ ಪುಣ್ಯಪ್ರಭಾವಚರಿತ್ರೆ ಪವಿತ್ರೆ ಸಲ್ಲಲಿತಗಾತ್ರೆ ಸುಣಧಾಣೀಯ ಪಾತ್ರಸಿ(ಶಿ) ರೋಮಣಿ ದಾನಚಿನ್ತಾಮಣಿ ಅಮಳ ಸವತಿಮದಖಣ್ಣನಿ ಸಮಸ್ತಾನ್ತಃಪುರ ಮುಖಮಣ್ಣನಿ ಶ್ರೀಮತ್ರಿಭುವನ ಮಲ್ಲದೇವವಿಶಾಳಾವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮತ್ಪಿರಿಯರಸಿ ಲಕ್ಷ್ಮಾದೇವಿಯರ" ಎಂದು ಬರುತ್ತದೆ. ಇವಳ ದೀರ್ಘ ಬಿರುದುಗಳನ್ನೇ ಗಮನಿಸಿದರೆ ಶೈವಧರ್ಮಿಯಳಾದ ಇವಳು ದೇಗುಲಗಳಿಗೆ ದಾನವಿಟ್ಟಿದ್ದಾಳೆ.

ಸಕಳಕಳಾಧಾರೆಯಾಗಿದ್ದು, ವಿಳಾವಿದ್ಯಾಧರಿಯು ಆಗಿದ್ದಾಳೆ. ಸವತಿ ಮತ್ಸರಭಾವನೆಯನ್ನು ಹೊಂದಿದ್ದಾಳೆ.

### ಹಿರಿಯ ಕೇತಲದೇವಿ

ರಾಣಿ ಹಿರಿಯ ಕೇತಲದೇವಿಯನ್ನು ಬಳ್ಳಾರಿ ಜಿಲ್ಲೆಯ ಸಿರಗುಪ್ಪ ಶಾಸನದಲ್ಲಿ[64] ಚಕ್ರವರ್ತಿಯ 'ಪ್ರಿಯಾಂಗನೆ' ಎಂದು ಕರೆದಿದೆ. ಶಾಸನದಲ್ಲಿ "ಸ್ವಸ್ತಿಯನವರತ ಪರಮ ಕಲ್ಯಾಣಾಭ್ಯುದಯ ಸಹಸ್ರಫಳಭೋಗ ಭಾಗಿನಿ ದ್ವಿತೀಯಲಕ್ಷ್ಮಿxxx ಮಾನೆ ಕಳಹಂಸಯಾನೆಯಗಣ್ಣ ಪುಣ್ಯಲಾವಣ್ಯ ಸಂಭೋಗ ಭಾಗಿನಿಯನೇಕ ದೇಶಭಾxx ಸಂಗೀತ ವಿದ್ಯಾಧರಿ ಸಕಳಕಳಾಧರಿಯನ್ತಜ್ಜುರ ಮುಖಮಣ್ಣಿನಿ ಪರಗೀತಲಗೋತ್ರನಿಧಾನೆ ಪರಿವಾರಕವಿವ್ವಿದ್ರುಮೆxxx ಶ್ರೀಮತ್ರಿಭುವನಮಲ್ಲದೇವ ವಿಶಾವಿವಕ್ಷಸ್ಥವಿxxx (ಸಿನಿ) ಯರಪ್ಪ ಶ್ರೀಮದಭಿನವಸರಸ್ವತಿ' ಎಂದು ಇವಳ ಬಿರುದುಗಳು ಬರುತ್ತವೆ.

ಸಂಗೀತವಿದ್ಯಾಧರಿಯಾಗಿದ್ದು, 'ಸಕಳಕಳಾಧರಿ' ಎಲ್ಲವನ್ನು ಬಲ್ಲ ರಾಣಿಯಾಗಿದ್ದಳು. ಒಟ್ಟಾರೆಯಾಗಿ ಎಲ್ಲಾ ಪಾಂಡಿತ್ಯವನ್ನು ಹೊಂದಿದ್ದಳು.

### ಜಾಕಲದೇವಿ

ಇವಳು ವಿಕ್ರಮಾದಿತ್ಯನ ರಾಣಿಯಾಗಿದ್ದಾಳೆ. ಇವಳ ಉಲ್ಲೇಖ ಇಂಗಳಗಿ[65] ಶಾಸನದಲ್ಲಿ ಬರುತ್ತದೆ. ಈಕೆಯು ಸಹಿತ ಸಾಮಾನ್ಯವಾಗಿ ಎಲ್ಲ ಬಿರುದುಗಳನ್ನು ಧರಿಸಿದ್ದಾಳೆ. 'ಅಭಿನವ ಸರಸ್ವತಿ', 'ಕರಣವಿದ್ಯಾಧರಿ', 'ಸಕಳವಿದ್ಯಾಧರಿ', 'ಸಹಜಬೆಡಂಗಿ', 'ಕದಂಬ ಚೂಡಾಮಣಿ', ದಾನವಿನೋದ ಇವು ಇವಳ ಬಿರುದುಗಳು. ಈಕೆಯು ವಿವಿಧ ದಾನಗಳನ್ನು ಮಾಡಿ ಪ್ರಸಿದ್ಧಿ ಹೊಂದಿ ಜಿನಧರ್ಮದಲ್ಲಿ ಹೆಚ್ಚಿನ ಶ್ರದ್ಧೆಯನ್ನು ಹೊಂದಿದ್ದಾಳೆ. ರೂಪಕ್ಕೆ, ದಾನ ಮೊದಲಾದುದಕ್ಕೆ ಪ್ರಸಿದ್ಧಿ ಪಡೆದ ಜಾಕಲದೇವಿ ವಿಕ್ರಮಾದಿತ್ಯನ ನೆಚ್ಚಿನ ರಾಣಿಯಾಗಿದ್ದಾಳೆ.

### ಶ್ರೀಯಾದೇವಿ

ಈಕೆಯ ಉಲ್ಲೇಖ ಬಗದಾಳ[66] ಶಾಸನದಲ್ಲಿ ಬರುತ್ತದೆ. ಇದರಲ್ಲಿ ಈಕೆಯ ಬಿರುದುಗಳು "ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ (ಫಳಭೋಗ) ಭಾಗಿನಿ ದೀನಾನಾಥ ಜಠರ (ದಾವxxxಳ ಭಾಗಿನಿ) ರಾಯನಾರಾಯಣ ಮನೋನುಕುಳ, ತೆರೆನಿತ್ತರ xxx ತ್ರಿದಶ xxx ಶನರ್ಯ xxx ಶ್ರೀಮತಿಭುವನ (ಮಲ್ಲ) ದೇವ ವಿಶಾಳವಕ್ಷಸ್ಥಳನಿವಾಸಿನಿಯರಪ್ಪ ಶ್ರೀಮತು ಶ್ರೀಯಾ (ದೇವಿಯ) ರು ಎಂದು ಬರುತ್ತದೆ. ಬಹುಶಃ ಪ್ರಸ್ತುತ ಬಗದಾಳ ಗ್ರಾಮವನ್ನೇ ಈಕೆ ಆಳುತ್ತಿರಬೇಕು.

### ಮಲೆಯಮತಿದೇವಿ

ಮಲೆಯಮತಿದೇವಿಯು ವಿಕ್ರಮಾದಿತ್ಯನ 'ಪಿರಿಯರಿಸಿ ಪಟ್ಟ ಮಹಾದೇವಿ' ಸ್ಥಾನವನ್ನು ಅಲಂಕರಿಸಿದವರಲ್ಲಿ ಇವಳು ಒಬ್ಬಳು. ದಿಗ್ಗಾವಿ ಶಾಸನದಲ್ಲಿ[67] ಈಕೆಯನ್ನು 'ಶ್ರೀಮದ್ರಾಯ

ಸರ್ವಜ್ಞನರ್ದ್ಧಾಂಗಿ' 'ಶ್ರೀಮತಿರಿಯಸಿಪಟ್ಟಮಹಾದೇವಿ ಶ್ರೃ (ಶ್ರೀ) ಮದಭಿನವ ಸರಸ್ವತಿ ಮಲೆಯಮತಿದೇವಿ' ಎಂಬ ಬಿರುದುಗಳಿಂದ ಕರೆಯಲಾಗಿದೆ.

ಚಿನ್ನತುಂಬಳಮ್[೧೬೦] ಶಾಸನದಲ್ಲಿ ಈಕೆಯ ಪ್ರಶಸ್ತಿಗಳನ್ನು ಹಾಗೂ ಬಿರುದುಗಳನ್ನು ಕಾಣಬಹುದು. ಸಾಮಾನ್ಯವಾಗಿ ಎಲ್ಲಾ ರಾಣಿಯರು ಹೊಂದಿದ ಪ್ರಶಸ್ತಿಯನ್ನು ಈ ಶಾಸನದಲ್ಲಿ ಕಾಣುತ್ತೇವೆ. 'ಶುಭಲಕ್ಷಣಲಕ್ಷಿತಾಂಗಿ', 'ರಾಯಸರ್ವಜ್ಞನರ್ದ್ಧಾಂಗಿ', 'ಚತುರಕಳಾಳಾಪೆ', 'ಗೋತ್ರರತ್ನಪ್ರದೀಪೆ' ಎಂಬ ಬಿರುದುಗಳನ್ನು ಹೊಂದಿದ್ದಾಳೆ ಒಳ್ಳೆಯ ಲಕ್ಷಣವನ್ನು ಹೊಂದಿದವಳೆಂದೂ, ಎಲ್ಲಾ ಪಾಂಡಿತ್ಯ ಬಲ್ಲವನ ಪತ್ನಿಯೆಂದು, ಕೌಶಲವನ್ನು ಹೊಂದಿದವಳೆಂದು ರತ್ನದಂತಹ ವಂಶಕ್ಕೆ ಸೇರಿದ್ದಾಳೆಂದೂ ಅವಳ ಬಿರುದುಗಳಿಂದ ತಿಳಿಯಬಹುದು.

## ಮನ್ನಾದೇವಿ

ಈಕೆಯ ಉಲ್ಲೇಖ ಅಳಂಪುರ[೧೬೧] ಶಾಸನದಲ್ಲಿ ಬರುತ್ತದೆ. ಇವಳು ಸಹಿತ ವಿಕ್ರಮಾದಿತ್ಯನ ರಾಣಿಯಾಗಿದ್ದಾಳೆ. ಈಕೆಯ ಪ್ರಶಸ್ತಿ ಹಾಗೂ ಬಿರುದುಗಳನ್ನು ಸ್ವಲ್ಪ ಭಿನ್ನರೂಪದಲ್ಲಿ ಕಾಣಬಹುದು. "ಸ್ವಸ್ತಿ ಶ್ರೀವಾಮದಾಚಾರ್ಯ್ಯ ಪಾದಾರಾಧ (ಕಾಶ್ವ) ಪತಿ ಗಜಪತಿ ನರಪತಿ ರಾಜತ್ರಯಾಧಿಪತಿ xxx ಕಣ (ಚಕ್ರ) ವರ್ತಿಯ ವಿಶಾಳಾವಕ್ಷಸ್ಥಳ ನಿವಾಸಿನಿಯರಪ್ಪ ಅಭಿನವಪಾರ್ವತಿ ಶ್ರೀಮನ್ಮಮಹಾದೇವಿ ಮನ್ನಾದೇವಿ" ಎಂದು ಹೇಳಲಾಗಿದೆ. ಈಕೆ ದೇವರಿಗೆ ದಾನ ಬಿಟ್ಟಳೆಂದು ಮೇಲಿನ ಬಿರುದುಗಳಿಂದ ತಿಳಿದುಬರುತ್ತದೆ.

## ಅಬ್ಬಲದೇವಿ

ಈಕೆಯ ಉಲ್ಲೇಖವು ಲಿಂಗಸೂರಿನ ಶಾಸನದಲ್ಲಿ[೧೬೨] ಬರುತ್ತದೆ. ಇವಳು ಸಹಿತ ವಿಕ್ರಮಾದಿತ್ಯನ ರಾಣಿ. ವಿಕ್ರಮಾದಿತ್ತನ ಪಾದಪದ್ಮೋಪಜೀವಿಯಾದಿ ಈಕೆಯ ಪ್ರಶಸ್ತಿ ಹಾಗೂ ಬಿರುದುಗಳು ಶಾಸನದಲ್ಲಿ "ಸ್ವಸ್ತನವರತ ಪರಮಕಲ್ಯಾಣಾಭ್ಯುದಯ ಸಹ(ಸ್ರ) ಫಳಭೋಗಭಾಗಿನಿ ದ್ವಿತಿಯ ಲಕ್ಷ್ಮೀಸಮಾನೆಕಳಹಂಸಯಾನೆ ಯಾಶ್ರಿತಜನಾನಿಧಾನೆರೂಪವಿದ್ಯಾಧರಿ ಸಕಳ ಕಳಾಧರಿ ಕಸ್ತೂರಿಕಾಮೋದೆ ದಾನವಿನೋದೆ ಶ್ರೀಮ(ತ್) ತ್ರಿಭುವನಮಲ್ಲದೇವವಿಷಾ (ಶಾ)ಳವಕ್ಷ ಸ್ಥಳನಿವಾಸಿನಿಯರಪ್ಪ ಶ್ರೀ ಮದಬ್ಬಲದೇವಿ" ಎಂದು ಹೇಳಲಾಗಿದೆ. ಈಕೆಯ ಬಿರುದುಗಳಿಂದ ಇವಳು ರೂಪವತಿಯಾಗಿದ್ದು, ವಿದ್ಯೆಯನ್ನು, ಕಲೆಗಳನ್ನು ಹಾಗೂ ಹಂಸವನ್ನು ಆಸನವಾಗಿ ಹೊಂದಿದ್ದವಳೆಂದು ತಿಳಿದುಬರುತ್ತದೆ. ಇವಳು ಈ 'ಲಿಂಗ' ಗ್ರಾಮವನ್ನು ಆಳುತ್ತಿದ್ದಳು ಇದು ಇಂದಿನ ಲಿಂಗಸೂರು ಆಗಿದೆ.

## ಭಾಗಲಮಹಾದೇವಿ

ಇವಳು ವಿಕ್ರಮಾದಿತ್ಯನ ರಾಣೀಯಾಗಿದ್ದು, ರಾಜರಸನ ಸೊಸೆಯಾಗಿದ್ದಳು. ಸಿರೂರ[೧೬೩]

ಶಾಸನದಲ್ಲಿ ಈಕೆಯ ಬಿರುದುಗಳನ್ನು 'ಪನ್ನೆಚಾತುರ್ಯ್ಯ ಚಿಹ್ನೆ ಶ್ರೀಮತ್ರಿಭುವ (ನ) xxx ವಿಶಾಳವಕ್ಷಸ್ಥಳನಿವಾಸಿನಿಯರಪ್ಪ ಮತ್ರಿಭುವನಮಲ್ಲ ಭಾಗಲಮಹಾದೇವಿ' ಎಂದು ಬರುತ್ತದೆ.

**ಅಕ್ಕಾದೇವಿ**

ಕಲ್ಯಾಣ ಚಾಲುಕ್ಯ ದಶವರ್ಮನ ಮಗಳು, ಜಯಸಿಂಹನ ಸಹೋದರಿ, ಹಾನಗಲ್ಲ ಕದಂಬ ಮಯೂರ ವರ್ಮನ ಮಡದಿಯೇ ಅಕ್ಕಾದೇವಿ. ಇವಳ ಬಿರುದುಗಳನ್ನು ಕ್ರಿಶ ೧೦೨೨ರ ಶಾಸನದಲ್ಲಿ ಇವಳನ್ನು 'ರಣಬೈರವಿ' 'ಉಚ್ಚಂಡರಣಬೈರವಿ' ಎಂಬ ಬಿರುದುಗಳಿಂದ ಕರೆದುದರಿಂದ ಕ್ರಿಶ ೧೦೧೦-೧೦೨೨ರ ಮಧ್ಯೆ ಅವಳು ರಣೋದ್ಯೋಗದಲ್ಲಿ ತೊಡಗಿರುವಂತಿದೆ. ಅವಳ ವಿರೋಚಿತ ಪರಾಕ್ರಮಕ್ಕೆ ಲಿಖಿತ ದಾಖಲೆ ಎಂಬಂತಿರುವ ಬೇಲೂರಿನ ಶಾಸನದ ಸುರಮ್ಯ ಬರಹಗಳಿಂದ ಅಕ್ಕಾದೇವಿಯ ಸತ್ವಸಾರಗಳನ್ನು ಬಿತ್ತರಿಸುವಂತಿದೆ.[೬೪] 'ಗುಣದಬೆಡಂಗಿ' ಎನ್ನುವುದು ಇವಳ ಇನ್ನೊಂದು ಬಿರುದು.

**ಅತ್ತಿಮಬ್ಬೆ**

ಕಲ್ಯಾಣ ಚಾಲುಕ್ಯ ಇಮ್ಮಡಿ ತೈಲಪನ ಮಗ ಇರವೆಬೆಡಂಗ ಸತ್ಯಾಶ್ರಯನ ಸಮಕಾಲೀನಳಾಗಿದ್ದು. ಕಲ್ಯಾಣ ಚಾಲುಕ್ಯರ ರಾಜಾಶ್ರಯ ಪಡೆದು ತನ್ನ ಮೇರು ವ್ಯಕ್ತಿತ್ವದಿಂದ ಕೀರ್ತಿ ಪಡೆದು ಅಜರಾಮರಳಾಗಿದ್ದಾಳೆ. ಚಾಲುಕ್ಯ ಚಕ್ರವರ್ತಿಗಳು, ಮಂತ್ರಿಗಳು ಹಾಗೂ ಮಹಾಜನರು ಅತ್ತಿಮಬ್ಬೆಯಲ್ಲಿ ಕಂಡುಬಂದ ದಾನಗುಣಗಳನ್ನು ಕಂಡು ಕಾಲಕ್ಕನುಸಾರವಾಗಿ ಹಲವಾರು ಪ್ರಶಸ್ತಿ ಹಾಗೂ ಬಿರುದುಗಳನ್ನು ನೀಡಿ ದಯಪಾಲಿಸಿದ್ದಾರೆ. ಅವು ಕೆಳಗಿನಂತಿವೆ.[೬೫]

೧. ದಾನಚಿಂತಾಮಣಿ
೨. ಗುಣದಂಕಕಾರ್ತಿ
೩. ಕಟಕ ಪವಿತ್ರೆ
೪. ಜಿನಜನನಿ
೫. ಜೈನ ಸಮಯ-ಯ್ಯೆಕಶರೋಮಣಿ
೬. ಸರ್ವಜೀವರ ಕ್ಷಾಮಣಿ
೭. ಜಿನಶಾಸನ ರಕ್ಷಾಮಣಿ
೮. ಆಕಳಂಕ ಚರಿತೆ
೯. ಶೌಚಿ
೧೦. ತೀರ್ಥಂಕರ ಜನನಿ.
೧೧. ದಾನವಿನೋದೆ
೧೨. ಜೀನಶಾಸನ ರುಚಿ
೧೩. ಚಾರಿತ್ರ್ಯಮೇರು
೧೪. ಭಮನೋರ್ಥ ಜನ್ಮಭೂಮಿ
೧೫. ಕವಿವರ ಕಾಮಧೇನು
೧೬. ಜಿನಧರ್ಮ ಪತಾಕೆ
೧೭. ಮಹಾಸತಿ ಕುಲತಿಲಕೆ
೧೮. ಜನಧಯಾವಶವರ್ತಿನಿಸ
೧೯. ಸರ್ವಕಲಾವಿದೆ..

ಅತ್ತಿಮಬ್ಬೆಯ ಬಿರುದುಗಳಿಂದ ಇವಳ ನುಡಿ ಪ್ರಾಮಾಣಿಕಳಾಗಿದ್ದಂತೆ ತಾನು ದಾನ ಮಾಡಿದ್ದನ್ನು ಮರೆಯುವ ವಿನಯಶೀಲಳಾಗಿದ್ದಳು. ಜೈನಧರ್ಮವು ಸಹ ದಾನಗುಣದ

ಸಾರ್ಥಕತೆಯನ್ನು ಪ್ರತಿಪಾದಿಸುತ್ತದೆ. ಭಾರತದ ಸ್ತ್ರೀ ಸಂಕುಲಕ್ಕೆ ಹೆಮ್ಮೆಯ ಗರಿಯನ್ನು ಬಾನೆತ್ತರಕ್ಕೇರಿಸಿದ್ದಾಳೆ. ಬದುಕಿನ ಎಲ್ಲಾ ರಂಗಗಳಲ್ಲಿ ಪುರುಷನಿಗೆ ಸರಿಸಮಾನಳಾಗಿ ಬಾಳಿದ ಅಂತಹ ದಿವ್ಯ ಚೇತನಗಳಲ್ಲಿ ದಾನ ಚಿಂತಾಮಣಿ ಅತ್ತಿಮಬ್ಬೆಯೂ ಒಬ್ಬಳಾಗಿದ್ದಾಳೆ.

ಹೀಗೆ ಮಹಿಳೆಯರ ಬಿರುದುಗಳಲ್ಲಿ ವಿದ್ವತ್ತಿನ ಉಲ್ಲೇಖಗಳು ಕೆಲವೊಮ್ಮೆ ದೊರೆಯುತ್ತಿರುವುದರಿಂದ ಅರಮನೆಯಂಥ ಉನ್ನತ ವರ್ಗದ ಕುಟುಂಬಗಳಲ್ಲಿ ವಿದ್ಯಾಭ್ಯಾಸಕ್ಕೆ, ಅದಕ್ಕಿಂತ ಹೆಚ್ಚು ನೃತ್ಯ ಸಂಗೀತವಾದಿ, ಲಲಿತಕಲೆಗಳ ಅಭ್ಯಾಸ ನಡೆಯುತ್ತಿರಬೇಕು. ಕೆಳಗಿನ ವರ್ಗಗಳಿಗೆ ಹೋದಂತೆ ಸ್ತ್ರೀಗೆ ಶಿಕ್ಷಣ ಅವಶ್ಯಕವೆಂದು ಅವರು ಭಾವಿಸಿರಲಿಲ್ಲ. ಸಾಮಾನ್ಯವಾಗಿ ಅವರೆಲ್ಲ ಗಮನಕೊಟ್ಟುದು ಜೀವನ ಶಿಕ್ಷಣಕ್ಕೆ.

ಕೇವಲ ರಾಣಿಯರು ಅಷ್ಟೆ ವಿದ್ಯೆ, ನೃತ್ಯಗಳಲ್ಲಿ ಪರಣತಿ ಹೊಂದಿದ್ದರು. ರಾಣಿಯರ ಬಿರುದುಗಳಲ್ಲಿ 'ಸವತಿಮತ್ಸರ' ಉಲ್ಲೇಖವಾಗಿದೆ. ಕಿರಿಯ ರಾಣಿಯರನ್ನು ಹಿರಿಯರಾಣಿ ಅಂದು ಕಟ್ಟ ನಿರ್ಭಂಧನೆಯಲ್ಲಿಡಲು ಶ್ರಮಿಸುತ್ತಿದ್ದುದು ಕಂಡುಬರುತ್ತದೆ. ಅಲ್ಲಲ್ಲಿ ಚದುರಿದಂತೆ ಕಂಡುಬರುವ ಈ ವಿದ್ಯಾವಿಶೇಷತೆಯ ಪೂರ್ಣ ನೋಟ ದೊರೆಯುವುದು. ಆರನೇ ವಿಕ್ರಮಾದಿತ್ಯನ ರಾಣಿ ವರ್ಗದಲ್ಲಿ ಸಾಹಿತ್ಯ ಕ್ಷೇತ್ರ, ರಾಜಕೀಯ ಚದುರಂಗದಾಟಗಳಲ್ಲಿ ಪಳಗಿದ್ದ ಮಹಿಳೆಯರವರು. ವಿಕ್ರಮಾದಿತ್ಯನು ತನ್ನ ಬಹುಸಂಖ್ಯಾತರಾದ ರಾಣಿಯರನ್ನು ಸಾಧ್ಯವಾದಷ್ಟು ದೂರದಲ್ಲಿಟ್ಟು ಸವತಿಮತ್ಸರ ತಪ್ಪಿಸಿದಂತೆ ರಾಜಕೀಯದತ್ತ ಅವರ ಮನಸ್ಸನ್ನು ತೊಡಗಿಸಿದ್ದಾನೆ. ಒಂದರ್ಥದಲ್ಲಿ ಸಂಸಾರಿಕೆ ನೆಮ್ಮದೆ ಇನ್ನೊಂದರ್ಥದಲ್ಲಿ ರಾಜಕೀಯ ಭದ್ರತೆಗೆ ಕಾರಣವಾಗಿದ್ದಾನೆ.

**೩.೪. ಇತರರು ಹೊಂದಿದ ಬಿರುದುಗಳು**

ಈ ಮೇಲೆ ತಿಳಿಸಿದಂತೆ ಅರಸರು, ರಾಣಿಯರು, ಮಂತ್ರಿ ಮಾಂಡಳಿಕರಂತೆ ಇತರರು ಅಂದರೆ ಗುರುಗಳು, ಕವಿಗಳು, ದಂಡನಾಯಕರು ಕೂಡಾ ಅನೇಕ ಬಿರುದುಗಳನ್ನು ಹೊಂದಿರುವುದು ಶಾಸನಾಧಾರಗಳಿಂದ ತಿಳಿದುಬರುತ್ತದೆ. ಈ ಕೆಳಗಿನಂತೆ ಇವರ ಬಿರುದುಗಳನ್ನು ಕಾಣಬಹುದು.

**ಯತಿಗಳ ಬಿರುದಾವಳಿಗಳು**

ಗುರು ಎಂದರೆ ಕತ್ತಲೆಯಿಂದ ಬೆಳಕಿನಡೆಗೆ ದಾರಿ ತೋರಿಸುವವ ಎಂದು ಅರ್ಥ. ಪ್ರಾಚೀನ ಸಮಾಜದಲ್ಲಿ ಗುರುಗಳು ಪ್ರಮುಖ ಸ್ಥಾನವನ್ನು ಪಡೆದಿದ್ದರು. ಇವರು ರಾಜಕುಟುಂಬಕ್ಕೆ ವಿದ್ಯೆಯನ್ನು ನೀಡುತ್ತಿದ್ದಲ್ಲದೆ ಆ ಸ್ಥಾನಕ್ಕೆ ಅರ್ಹರನ್ನಾಗಿಸುವ ಮಹತ್ವದ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು. ಆದ್ದರಿಂದ ಇವರಿಗೆ ವಿಶೇಷವಾದ ಮಾನ್ಯತೆ ಇತ್ತು. ಇವರ ಪಾಂಡಿತ್ಯಾನುಸಾರ ಇವರಿಗೆ ಬಿರುದುಗಳನ್ನು ನೀಡಿದ್ದರೆಂಬುದು ಶಾಸನದಲ್ಲಿನ ಉಲ್ಲೇಖಗಳಿಂದ ತಿಳಿಯಬಹುದು. ಅಂತಹ ಉಲ್ಲೇಖಗಳಲ್ಲಿ ಕೆಲವೊಂದನ್ನು ಈ ಮುಂದೆ ತಿಳಿಸಲಾಗಿದೆ.

**ದಿವಾಕರಣಂದಿ**

ಶ್ರವಣಬೆಳಗೊಳದ ಶಾಸನವೊಂದರಲ್ಲಿ ದಿವಾಕರಣಂದಿಯನ್ನು "ಪರಮಾಪ್ತಾಖಿಳಶಾಸ್ತ್ರ ತತ್ವಳಯಂ ಸಿದ್ಧಾಂತ ಚೂಡಾಮಣಿ..." ಎಂದು ವರ್ಣಿಸಲಾಗಿದೆ. ವಿಧಿತ ವ್ಯಾಕರಣ ರಚಿಸುವವನು ಸಿದ್ಧಾಂತ ವಿಶೇಷದಿಂತ್ತೆ ವಿದ್ವಾಸ್ಪದರೆಂದೀ ಧರೆಬಿಣ್ಣಪ್ರಭು ಹಾಗೂ ಜಿನೇಂದ್ರ ಶಾಸನ ಸರೋವರ ರಾಜಹಂಸ ಎಂದು ಬಣ್ಣಿಸಿದೆ. ಇದಲ್ಲದೆ ಇವನಿಗೆ 'ಉಭಯ ಸಿದ್ಧಾಂತ ರತ್ನಾಕರ' ಎರಡು ಭಾಷೆಗಳಲ್ಲಿ ಕಾವ್ಯವನ್ನು ರಚಿಸುವವನು ಎಂಬ ಬಿರುದಿನಿಂದ ತಿಳಿದುಬರುತ್ತದೆ.[೧೬]

**ರುದ್ರಭಟ್ಟೋಪಾಧ್ಯಾಯರು**

ಆರನೆಯ ವಿಕ್ರಮಾದಿತ್ಯನ ವಿದ್ಯಾ ಗುರುಗಳಲ್ಲಿ ರುದ್ರಭಟ್ಟೋಪಾಧ್ಯಾಯರು ಒಬ್ಬರು. ಇವರು ವಿಕ್ರಮಾದಿತ್ಯನಿಗೆ ವಿದ್ಯೆಯನ್ನು ಕಲಿಸಿ ಸುಶಿಕ್ಷಿತನನ್ನಾಗಿ ಮಾಡಿದವರಾಗಿದ್ದಾರೆ. ಇವರನ್ನು 'ಭಟ್ಟೋಪಾಧ್ಯಾಯ' ಶ್ರೀಮದಯ್ಯಂಗಳು' ಎಂದು ಶಾಸನಗಳಲ್ಲಿ ಕರೆಯಲಾಗಿದೆ. ಅಂಕಲಗಿ[೧೭] ಶಾಸನದಲ್ಲಿ ಇವರನ್ನು "ತ್ರಿಭುವನಮಲ್ಲದೇವರಾರಾಧ್ಯರಪ್ಪ ಶ್ರೀಮದಾಯ್ಯಂಗಳು ಮಹಾಪ್ರಾಧಾನಂ ದಂಡನಾಯಕಂ ಶ್ರೀ ರುದ್ರಭಟ್ಟೋಪಾದ್ಯಾಯ" ಎಂದು ಕರೆಯಲಾಗಿದೆ. ಇವು ಇವರ ಬಿರುದುಗಳಾಗಿರಬಹುದು.

ತತ್ಪುರುಷ ಶಿವಚಿಂತಾಯಕರನು ವಿಕ್ರಮಾದಿತ್ಯನ ರಾಜ ಗುರುವಾದ ಉಲ್ಲೇಖ ಕರಡಿಕಲ್[೧೮] ಶಾಸನದಲ್ಲಿ ಬರುತ್ತದೆ. ಇದರಲ್ಲಿ ಇವನ ಪ್ರಶಸ್ತಿ ಹಾಗೂ ಬಿರುದುಗಳು ಉಲ್ಲೇಖ ಬರುತ್ತದೆ. 'ಗುಣಮಣಿಗಣ ಭೂಷಣಂ', 'ಪರಬಳಭೀಷಂ', 'ಕೋದಂಡ ಚತುರ್ಭುಜಂ', 'ವಿವೇಕ ಗರುಡಧ್ವಜಂ' ಇವು ಅವನ ಬಿರುದುಗಳಾಗಿವೆ. 'ಪರಬಳಭೀಷಣಂ' ಎಂಬ ಬಿರುದಿನಿಂದ ಇವನ ಶೌರ್ಯವನ್ನು ಇಲ್ಲವೆ ಪಾಂಡಿತ್ಯವನ್ನು ಸೂಚಿಸುತ್ತದೆ.

**ಸೋಮೇಶ್ವರ ಪಂಡಿತ**

ಬಳ್ಳಿಗಾಮೆಯ ಕೋಡಿಮಠದ ಗುರುಪರಂಪರೆಯಲ್ಲಿ ಸೋಮೇಶ್ವರ ಪಂಡಿತನು ಮೂರನೆಯವನು ಇವನ ಕಾಲದಲ್ಲಿ ಕೋಡಿಮಠವು ಬಹು ಪ್ರಸಿದ್ಧಿಯನ್ನು ಹೊಂದಿತ್ತು. ಶಾಸನಗಳಲ್ಲಿ ಇವನ ಬಿರುದುಗಳನ್ನು ಕಾಣಬಹುದು. 'ಸಾಹಿತ್ಯ ವಿದ್ಯಾಪ್ರವೀಣ', 'ದಕ್ಷಿಣ ಭಾಗದ ತಾವರೆ', 'ಭರತಾದ್ಯನೇಕ' ಇವನ ಬಿರುದುಗಳಾಗಿದ್ದು ಇದರಿಂದ ಇವನು ಇವರು ತರ್ಕ, ವ್ಯಾಕರಣ, ಕಾವ್ಯ, ನಾಟಕ, ಭರತಾದ್ಯ ಅನೇಕ ಸಾಹಿತ್ಯ ವಿದ್ಯಾಪರಿಣತನಾಗಿದ್ದನು.[೧೯]

**ವಾಮಶಕ್ತಿ ಪಂಡಿತರು**

'ಸಂಚರಿಸುವ ಕಲ್ಪತರು' ಎಂದು ವಾದಿವಾಗ್ಮಿ ಪ್ರಮುಖನೆಂದು ವರ್ಣಿಸಲ್ಪಟ್ಟಿದ್ದಾನೆ. ಇವನು 'ವಾದಿಗಣಂಗಳ ಭಟ್ಟ' ಎಂಬ ಬಿರುದನ್ನು ಹೊಂದಿದ್ದಾನೆ.

### ಅಚಲ ಪ್ರಕಾಶ ಪಂಡಿತರು

ವಾಕ್ ಕಲೆ ಸಭೆಗಳಲ್ಲಿ ಪ್ರಸಿದ್ಧಿ ಪಡೆದಿದ್ದರು. ಇವರು ಪ್ರತಿ ದಿನವು ಶೃತಿ, ಸ್ಮೃತಿ, ಪುರಾಣಗಳು, ಶಾಸ್ತ್ರಗಳ ಹೇಳಿಕೆಗಳಲ್ಲಿ ಚರ್ಚಾ ಗೋಷ್ಠಿಗಳನ್ನು ನಡೆಸುವಲ್ಲಿ ಎತ್ತಿದ ಕೈ ಆಗಿತ್ತು. 'ವಾದಿಂಗಳ್ ಭಟ್ಟ' ಎಂದು ಆತನ ಬಿರುದಿತ್ತು. ವಾದಿಕೋಲಾಹಲ, ವಾದಿಭಯಂಕರ; ವಾದಿರಾಜ, ವಾದಿಗನಂಗಳ ಎಂದೂ ವಿದ್ವಾಂಸರಿಗೆ ಬಿರುದುಗಳಿದ್ದವು.

### ಮುನಿಚಂದ್ರ

ರಟ್ಟರ೧೫ ನಾಯಕನಾದ ನಾಲ್ಕನೇ ಲಕ್ಷ್ಮಿದೇವರಸ ರಾಜಗುರುವಾಗಿದ್ದ ಮುನಿಚಂದ್ರ ಕ್ರಿ.ಶ. ೧೨೨೮ರ ಶಾಸನದಲ್ಲಿ "ರಟ್ಟರೂವಿ ಪ್ರತಿಷ್ಠಾಚಾರ್ಯ" ಎಂಬ ಬಿರುದಿನಿಂದ ವರ್ಣಿತನಾಗಿದ್ದಾನೆ. ರಟ್ಟರ ರಾಜ್ಯವನ್ನು ಪ್ರತಿಷ್ಠಾಪನೆ ಮಾಡಿದವನೆಂದು ಈತನ ಬಿರುದಿನಿಂದ ಗೊತ್ತಾಗುತ್ತದೆ.

### ವೈಜನಾಥ ಭಟ್ಟೋಪಾಧ್ಯಯ

ಜೆಡ್ಡುಳಗೆ ನಾಡಿನಲ್ಲಿ ಉದ್ರಿಯು ಒಂದು ಪ್ರಸಿದ್ಧ ಬ್ರಹ್ಮಪುರಿಯಾಗಿತ್ತು. ಬ್ರಹ್ಮಪುರಿಯ ಮುಖ್ಯಸ್ಥನಾಗಿದ್ದ ಇವನಿಗೆ 'ವಿದ್ಯಾಚಕ್ರವರ್ತಿ' ಎಂಬ ಬಿರುದಿನಿಂದ ಕ್ರಿ.ಶ. ೧೨೧೭ರ ಉದ್ರಿಯ ಶಾಸನ ವರ್ಣಿಸಿವೆ.

### ಕವಿಗಳ ಬಿರುದಾವಳಿಗಳು

ಕನ್ನಡ ಸಾಹಿತ್ಯಕ್ಕೆ ಒಂದನೆಯ ಸೋಮೇಶ್ವರನ ಕಾಲ ಅಪೂರ್ವವಾದ ಕಾಲ ಸಾಹಸಿಯೂ, ಸಾಹಿತ್ಯಾಸಕ್ತನೂ ಆಗಿದ್ದ. ಈತನ ಉದಾರತೆ ಸಮೃದ್ಧವಾದ ಸಾಹಿತ್ಯ ಸೃಷ್ಟಿಗೆ ಕಾರಣವಾಯಿತು. ಸಾಹಿತ್ಯ ಒಂದು ನಾಡಿನ ಸಂಸ್ಕೃತಿಯ ಸಂಕೇತ. ಆ ನಾಡಿನ ಮಹತ್ವವನ್ನು ಹೆಚ್ಚಿಸುವ ಶ್ರೀಮಂತ ಮಾಧ್ಯಮ. ಈ ಸಾಹಿತ್ಯವನ್ನು ರಚಿಸಿದ ಕವಿಗಳು ಇವರ ಕಾಲದಲ್ಲಿ ಪ್ರಮುಖವಾದ ಸ್ಥಾನವನ್ನು ಹೊಂದಿದ್ದು, ಸಮಾಜದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಈ ಸಾಹಿತ್ಯ ಕೃತಿಗಳನ್ನು ರಚನೆ ಮಾಡುವವರ ಮೂಲಕ ಪ್ರಖ್ಯಾತಿಯನ್ನು ಹೊಂದಿ ವಿಶೇಷವಾದ ಪ್ರಭಾವವನ್ನು ಹೊಂದಿದ್ದಾರೆಯೆಂದು ಅವರ ಬಿರುದುಗಳ ಮುಖಾಂತರ ತಿಳಿಯಬಹುದು. ಈ ಕೆಳಗಿನಂತೆ ಕವಿಗಳನ್ನು ಹಾಗೂ ಅವರ ಬಿರುದುಗಳನ್ನು ತಿಳಿಯಬಹುದು.

### ಚಾವುಂಡರಾಯ (ಕ್ರಿ.ಶ. ೧೦೨೫)

ಚಾವುಂಡರಾಯನ ಹೆಸರಿನ ಮೂವರು ವ್ಯಕ್ತಿಗಳು ಒಂದನೆಯ ಸೋಮೇಶ್ವರನ ಕಾಲಾವಧಿಯಲ್ಲೇ ಕಂಡುಬರುತ್ತಾರೆ. ಅವರೆಲ್ಲರೂ ಕ್ರಿ.ಶ. ೧೦೧೫ ರಿಂದ ಕ್ರಿ.ಶ. ೧೦೬೩ ರ

ಅವಧಿಯಲ್ಲಿ ಬಾಳಿದವರು. ಈತನು ಪಶ್ಚಿಮ ಚಾಲುಕ್ಯ ಚಕ್ರವರ್ತಿ ಎರಡನೆಯ ಜಯಸಿಂಹ (ಕ್ರಿ.ಶ. ೧೦೧೫-೧೦೪೫) ಆಸ್ಥಾನದಲ್ಲಿ ಮನ್ನಣೆ ಪಡೆದ ವಿದ್ವತ್ಕವಿ 'ಲೋಕೋಪಕಾರ'ವೆಂಬುದು ಈತನ ಶಾಸ್ತ್ರ ಗ್ರಂಥದ ಹೆಸರು 'ಅಚಲಿತ ಶಿಷ್ಯ ಕಲ್ಪಿದ್ರವ', 'ಕಾವ್ಯ ವಿಲಾಸ', 'ವಾಗ್ವಧೂಮಂಡನ ಮುಖತಿಲಕ', 'ದಾನ ವಿನೋದ' ಮುಂತಾದವುಗಳು ಈತನ ಬಿರುದುಗಳು. ಕಾವ್ಯಗಳ ರಚನೆಯಲ್ಲಿ ಪರಣಿತಿಯನ್ನು ಹೊಂದಿದ್ದನೆಂದು 'ಕಾವ್ಯ ವಿಲಾಸ' ಎಂಬ ಬಿರುದಿನಿಂದ ತಿಳಿಯುತ್ತದೆ. ಅಥವಾ 'ಕಾವ್ಯ' ಈತನಿಗೆ ಪ್ರಿಯವಾಗಿತ್ತು.

**ಕೀರ್ತಿವರ್ಮ (ಕ್ರಿ.ಶ. ೧೦೪೨)**

ಈತನು ಪಶ್ಚಿಮ ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯ ಸೋಮೇಶ್ವರನ ಮಗನೂ, ಮೂರನೆಯ ಜಯಸಿಂಹನ ಸಹೋದರನನೂ ಆಗಿದ್ದು, ವೈದ್ಯರತ್ನ'ನೆನಿಸಿದ್ದವನು.[೧೮೧] ಇದು ಇವನ ಬಿರುದು ಆಗಿದೆ. ಈತನ ಗೋವೈದ್ಯ ಗ್ರಂಥವು ಕನ್ನಡ ವೈದ್ಯಶಾಸ್ತ್ರಕ್ಕಷ್ಟೇ ಅಲ್ಲ, ಭಾರತೀಯ ವೈದ್ಯಶಾಸ್ತ್ರಕ್ಕೂ ಒಂದು ವಿಶಿಷ್ಟ ರೀತಿಯ ಕೊಡುಗೆಯನ್ನಬಹುದಾಗಿದೆ. ಈ ಗ್ರಂಥದಲ್ಲಿ ಪ್ರತಿಪಾದ್ಯ ವಿಷಯವೇನೆಂದು ಆದಿಯಲ್ಲೇ ಹೀಗೆ ಹೇಳಲಾಗಿದೆ.

"ಬಡವಂ ಕೊಬ್ಬದ ಬಂಜೆಯ
ನುಡುಗಡೆ ಹಯಮಾಡಿ ಕಜೆವ ತೇಜನಂ ಕುತ್ತಂ
ಬಿಡುವಂತು ವೈರಿಕರಿಹರಿ
ನುಡಿದಂ ಕಂದರ್ಪ ಕೀರ್ತಿವಿಲಾಸಂ"

**ಮಲ್ಲಿಷೇಣ (ಕ್ರಿ.ಶ. ೧೦೫೦)**

ಮಲ್ಲಿಷೇಣ ಸಂಸ್ಕೃತದ ಸುಪ್ರಸಿದ್ಧ ಕವಿ. ಈತನನ್ನು ಮಲ್ಲಿಷೇಣ ಸೂರಿ, ಯತಿ, ಮುನಿ, ಪಂಡಿತನೆಂದು ಕರೆಯಲಾಗಿದೆ.[೧೮೨] ಈತನ ಕಾವ್ಯಗಳ ಪ್ರಶಸ್ತಿ ಪದ್ಯಗಳಿಂದ ಆತನ ಕೆಲವು ವೃತ್ತಾಂತ ತಿಳಿದುಬರುತ್ತದೆ.

"ತೀರ್ಥ ಶ್ರೀ ಮುಲಗುಂದನಾಮ್ನಿನಗರೇ ಶ್ರೀ ಜೈನಧರ್ಮಾಲಯೇ ಸ್ಥಿತ್ವಾಶ್ರೀ ಚಕ್ರವರ್ತಿಯತಿಪಃ ಶ್ರೀಮಲ್ಲಿಕ್ಷೀಷೇಣಾಹ್ವಯ" ಎಂದಿದ್ದು, ಈತ ಜೈನ ಕ್ಷೇತ್ರ ಮುಳಗುಂದದ ಜೈನ ಮಂದಿರದಲ್ಲಿದ್ದನೆಂದು ತಿಳಿದುಬರುತ್ತದೆ.[೧೮೩] ಈತನು ವ್ಯಾಕರಣಶಾಸ್ತ್ರ, ಕಾವ್ಯಶಾಸ್ತ್ರ ಹಾಗೂ ತರ್ಕಶಾಸ್ತ್ರಗಳಲ್ಲಿ ಪಾರಂಗತನಾಗಿದ್ದನು. ಸಂಸ್ಕೃತಿ, ಪ್ರಾಕೃತ ಭಾಷೆಗಳಲ್ಲಿ ಪ್ರಕಾಂಡ ಪಂಡಿತನಾಗಿದ್ದನು. ಕನ್ನಡ ಭಾಷೆಯನ್ನು ಬಲ್ಲವನಾಗಿದ್ದರಿಂದ 'ಉಭಯ ಭಾಷಾ ಚಕ್ರವರ್ತಿ' ಎಂಬ ಬಿರುದು ಬಂದಿರಬಹುದು. ಇವನಿಗೆ 'ಕವಿರಾಜ ಶೇಖರ', 'ಸಕಲಾಗಮವೇದಿ', 'ಲಕ್ಷಣವೇದಿ', 'ತರ್ಕವೇದಿ', 'ಗಾರುಡಮಂತ್ರ', 'ವಾದವೇದಿ', ಮುಂತಾದ ಬಿರುದುಗಳಿದ್ದವು.

ಇವನು 'ಶ್ರೀಮದ್ರವಿಳ ಸಂಘವನವಸಂತಸಮಯ', 'ಸೇನಗಣಗಭಗಣ ನಾಯಕ', ಮೂಲನೂರಾನ್ವಯ ಶಿರಶೇಖರ' ಎನಿಸಿದ್ದನು.[೧೮೪] ಶ್ರೇಷ್ಠ ಕವಿಯಾಗಿದ್ದ ಈತನ 'ಕವಿತಾ ಪ್ರೌಢಿಮೆ' ಮಿಗಿಲಾಗಿದ್ದು, ಈತನ ಎದಿರುಯಾವೊಬ್ಬ ಸಂಸ್ಕೃತ, ಪ್ರಾಕೃತ ಕವಿ ನಿಲ್ಲುವ ಸಾಮರ್ಥ್ಯ ಪಡೆದಿರಲಿಲ್ಲವೆಂದು ಹೇಳಲಾಗುತ್ತದೆ.[೧೮೫]

### ಶ್ರೀಧರಾಚಾರ್ಯ (ಕ್ರಿ.ಶ. ೧೦೪೯) 'ಜಾತಕ ತಿಲಕ'

ಶ್ರೀಧರಾಚಾರ್ಯ ಬೆಳವಲನಾಡಿನ ನರಗುಂದದ ಸುಪ್ರಸಿದ್ಧ ಜೈನಕವಿ, ವಿದ್ವಾಂಸ, ಪಂಡಿತ. ಈತ ರಚಿಸಿದ 'ಜಾತಕ ತಿಲಕ' ಗ್ರಂಥದ ಅಂತ್ಯದಲ್ಲಿ ಶಕವರ್ಷ ೯೭೧ (೧೦೪೯)ನೇ ಸಂವತ್ಸರದಂದು ಗ್ರಂಥಪೂರ್ಣವಾಯಿತೆಂಬ ಉಲ್ಲೇಖವಿರುವುದರಿಂದ ಇವನು ಸಹ ಒಂದನೆಯ ಸೋಮೇಶ್ವರ ಆಹಾವಮಲ್ಲನ (ಕ್ರಿ.ಶ. ೧೦೪೪-೧೦೬೮) ಕಾಲದವನೆಂದು ನಿರ್ವಿವಾದವಾಗಿದೆ. ಈತ ಉತ್ತಮ ಶಾಸ್ತ್ರಕಾರನಷ್ಟೇ ಅಲ್ಲದೆ ಉತ್ತಮ ಕವಿಯೂ ಆಗಿರುವುದರಿಂದ ಶಾಸನಗಳಲ್ಲಿ ಇವನ ವಿಶೇಷಣವನ್ನು ಕಾಣುತ್ತೇವೆ.

"ರಸಭಾವ ಸಮನ್ವಿತನೆಂ
ದು ಸುಭಗನೆಂದಖಿಳವೇದಿಯೆಂದನ್ವಿತನೆಂ
ದು ಸಮಗ್ರನೆಂದು ಸಲೆ ಬಣ್ಣಿಸುವುದು ಧರೆಗದ್ಯಪದ್ಯ
ವಿದ್ಯಾಧರನಂ" (೨೪-೪೩)

ಎಂಬ ಅವನ ಪ್ರಶಸ್ತಿಯಲ್ಲಿ 'ವಿದ್ಯಾಧರನಂ' ಎಂಬ ಬಿರುದನ್ನು ಕಾಣಬಹುದು.

### ನಾಗದೇವ ಕ್ರಿ.ಶ. ೧೦೭೮

ನಾಗದೇವ ಕುರ್ತುಕೋಟಿಯಲ್ಲಿ ಎರಡು ಶಾಸನಗಳನ್ನು ನರಗುಂದದ ದಂಡಾಪುರದಲ್ಲಿ ಒಂದು ಶಾಸನವನ್ನು ಹೀಗೆ ಒಟ್ಟು ೩ ದೀರ್ಘ ಶಾಸನಗಳನ್ನು ರಚಿಸಿದ್ದಾನೆ. ಇವನು ಉತ್ತರ ಗದಗ ಪ್ರದೇಶದ ಶ್ರೇಷ್ಠ ಶಾಸನ ಕವಿಯಾಗಿದ್ದನು. ನಾಗದೇವನು ಶ್ರೇಷ್ಠ ವಿದ್ವಾಂಸನಾಗಿದ್ದು ವಿದ್ವಾಂಸ ಸಮೂಹವೇ ಮೆಚ್ಚಿಕೊಳ್ಳುವಂತೆ ಶಾಸನದ ಕಾವ್ಯವನ್ನು ರಚಿಸಿದನೆಂದು ತಿಳಿದುಬರುತ್ತದೆ. ಅಲ್ಲದೆ ಇವನು ಪ್ರಸನ್ನ ಕವಿಯಾಗಿ 'ವಿಜಯಲಕ್ಷ್ಮೀಕಾಂತ' ಎಂಬ ಬಿರುದಿನಿಂದ ವರ್ಣಿಸಿಕೊಂಡಿದ್ದಾನೆ.

### ಸರ್ವಜ್ಞ ಪಟ್ಟ ವರ್ಧನ

ಎರಡನೇ ಜಗದೇಕಮಲ್ಲನ ನರಗುಂದ ಶಾಸನವು[೧೮೬] ಸರ್ವಜ್ಞ ಪಟ್ಟವರ್ಧನ ಕವಿಯಿಂದ ಬರೆಯಲ್ಪಟ್ಟಿದೆ. ಇವನು ನರಗುಂದ ಪ್ರದೇಶದ ಶ್ರೇಷ್ಠ ಕವಿಯಾಗಿದ್ದು ದೀರ್ಘವಾದ ೮೩

ಸಾಲುಗಳ ಶಾಸನವನ್ನು ರಚಿಸಿದನು. ಈ ಶಾಸನವು ವೃತ್ತ ಹಾಗೂ ಕಂದ ಪದ್ಯಗಳಿಂದ ಕೂಡಿದ್ದಾಗಿದೆ. ಇಲ್ಲಿ 'ಸರ್ವಜ್ಞ' ಎಂಬುದು ಕವಿ ಪಟ್ಟವರ್ಧನನು ಧರಿಸಿದ ಬಿರುದಾಗಿರಬಹುದು.

ಈ ಮೇಲಿನ ಶಾಸನ ಕವಿಗಳಲ್ಲದೆ ಇನ್ನೂ ಅನೇಕ ಕವಿಗಳನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಇವರಲ್ಲಿ ಪ್ರಮುಖವಾದವರನ್ನು ಮಾತ್ರ ಪರಿಚಯಿಸಿದ್ದೇನೆ.

## ದಂಡನಾಯಕರ ಬಿರುದಾವಳಿಗಳು

ಅರಸನ ಆಡಳಿತದಲ್ಲಿ ದಂಡನಾಯಕರ ಪಾತ್ರವೂ ಕೂಡ ಮಹತ್ವವಾಗಿದೆ. ಈ ದಂಡನಾಯಕರಿಗೆ ಒಂದು ವಿಶಿಷ್ಟ ಸ್ಥಾನವಿದೆ. ಇವರನ್ನು ಚಕ್ರವರ್ತಿಗಳು ಇಲ್ಲವೆ ಮಹಾಮಂಡಳೇಶ್ವರು ನೇಮಿಸಲ್ಪಟ್ಟ ಅಧಿಕಾರಿಗಳಾಗಿದ್ದರು. ಸಾಮಾನ್ಯವಾಗಿ ದಂಡನಾಯಕ ಎಂದರೆ ಸೈನ್ಯದ ನಾಯಕ ಎಂದು ಅರ್ಥ. ಆಡಳಿತದಲ್ಲಿ ಅವರ ಪಾತ್ರ ಎಷ್ಟು ಪ್ರಮುಖವಾಗಿತ್ತೆಂದು ಅವರ ಬಿರುದಾವಳಿಗಳಿಂದ ತಿಳಿಯಬಹುದು. ಕೆಲವು ಪ್ರಮುಖ ದಂಡನಾಯಕರ ಬಿರುದುಗಳನ್ನು ಈ ಕೆಳಗಿನಂತೆ ಕಾಣಬಹುದು.

### ಮೇದಿಮಯ್ಯ

ಕ್ರಿ.ಶ. ೧೧೪೧ರ ಕಣವಿ ಶಾಸನದಲ್ಲಿ[೧೮೬] ಮೇದಿಮಯ್ಯನ ಉಲ್ಲೇಖ ಬರುತ್ತದೆ. ಈತ ಮಹಾದೇವರಸನ ಮಹಾಪ್ರಧಾನ ದಂಡನಾಯಕ ಮತ್ತು ಪೆರ್ಜಂಕ, ವಡ್ಡಾರಾವುಳದ ಅಧಿಕಾರಿಯಾಗಿದ್ದನು ಮತ್ತು ೨೦೦ರ ಸುಂಕವೆಗಡೆಯೂ ಆಗಿದ್ದನೆಂದು ಮುಳಗುಂದದ ಶಾಸನವು ಉಲ್ಲೇಖಿಸಿದೆ.

ಶಾಸನವು ಸಮಸ್ತಪ್ರವನಸಂಸ್ತೂಮಾನ, ಬ್ರಹ್ಮವಂಶಾಂಬರ, ನ್ಯಾಯಣಿವಿದ್ವಿಷ ಜನ ಚಿಂತಮಣಿ.... ಭೋಗ ಪುರಂದರ ಸಹಜಗುಣಸುಂದರ ಎಂದು ಮುಂತಾದ ಬಿರುದುಗಳಿಂದ ವರ್ಣಿಸಿದೆ.

### ಬರ್ಮರಸ

ಬರ್ಮರಸನ ಉಲ್ಲೇಖವು ಬಾಗಳಿ[೧೮೮] ಶಾಸನದಲ್ಲಿ ಬರುತ್ತದೆ. ಇವನು ಮಹಾ ಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಅನಂತಪಾಳಯ್ಯನ ಕೆಳಗೆ ದಂಡನಾಯಕನಾಗಿದ್ದು 'ಮಹಾಮಾತ್ಯ' ಎಂಬ ಪದವಿಯನ್ನು ಪಡೆದಿದ್ದನು. ಬಾಗಳಿ ಶಾಸನದಲ್ಲಿ ತನ್ನನ್ನು ಚಕ್ರವರ್ತಿ ವಿಕ್ರಮಾದಿತ್ಯನ ಪಾದಪದ್ಮೋಪ ಜೀವಿಯೆಂದು ಕರೆದುಕೊಂಡಿದ್ದಾನೆ. 'ಸಾಹಸೋತ್ತುಂಗ', 'ಅಯ್ಯನಸಿಂಗ' ಮೊದಲಾದ ಬಿರುದುಗಳನ್ನು ಧರಿಸಿದ್ದಾನೆ. 'ಅಚ್ಯುಪನ್ನಾಯದಧಿಷ್ಠಾಯಕಂ ದಣ್ಣನಾಯಕಂ ಬರ್ಮ್ಮರಸರ್' ಎಂದು ಶಾಸನದಲ್ಲಿ ಈತನನ್ನು ಕರೆಯಲಾಗಿದೆ.

### ಕೊಪ್ಪದಂಡನಾಥ

ಕೊಪ್ಪದಂಡನಾಥನ ಉಲ್ಲೇಖವು ಅಡಕಿಯ[೬೯] ಶಾಸನದಲ್ಲಿ ಬರುತ್ತದೆ. ಅಡಕ್ಕಿಯ ಪ್ರಭು 'ಕೊಪ್ಪದಣ್ಣನಾಥ' ಎಂದು ಈತನನ್ನು ಕರೆಯಲಾಗಿದೆ. ಈತನಿಗೆ 'ಚೋಳಕಟಕಸೂಱೆಕಾಱಂನುಂ', ಚಾಳುಕ್ಯ ಕಟಕರ ಮೇಲಿನ ಕ್ಷಾಪಾಳನಂ', 'ಪ್ರತಿಜ್ಞಾವರಸುರಾಮ', 'ಸತ್ಯಸಂಪನ್ನ' ಎಂಬ ಬಿರುದುಗಳಿದ್ದವು. ಕಟಕರಕ್ಷಪಾಳ ಬಿರುದಿನಿಂದ ತಿಳಿಯುವೇದೆನೆಂದರೆ ಈತನು ಚೋಳರ ವಿರುದ್ಧ ಚಕ್ರವರ್ತಿಯ ಪರವಾಗಿ ಯುದ್ಧ ಮಾಡಿರಬೇಕು. ಆದುದರಿಂದ ಈ ಬಿರುದು ಇವನಿಗೆ ಬಂದಿರುತ್ತದೆ. ಋಗ್ವೇದ, ಯರ್ಜುವೇದ, ಸಾಮವೇದ, ಅಥರ್ವಣವೇದಗಳಲ್ಲಿ ಪರಿಣತನಾಗಿದ್ದನೆಂದು ಪ್ರತಿಜ್ಞಾಪರಸುರಾಮ, ಸತ್ಯಸಂಪನ್ನ ಬಿರುದುಗಳಿಂದ ತಿಳಿದುಬರುತ್ತದೆ.

### ಮುದ್ದರಸ

ಈತನ ಉಲ್ಲೇಖವು ಸಹಿತ ಬಾಗಳಿ ಶಾಸನದಲ್ಲಿ[೭೦] ಬರುತ್ತದೆ. ವಿಕ್ರಮಾದಿತ್ಯನ ಪಾದಪದ್ಮೋಪ ಜೀವಿಯಾಗಿದ್ದು 'ಮಹಾಮಾತ್ಯ' ಪದವಿಯನ್ನು ಹೊಂದಿದ್ದಾನೆ. 'ಆಶ್ರಿತ ಜನಕಲ್ಪವೃಕ್ಷ, ಪತಿಕಾರ್ಯದಕ್ಷ, ನಿಯೋಗ ಯೋಗನಾರಾಯಣ, ನೀತಿಪಾರಾಯಣ, ಮೊದಲಾದ ಬಿರುದುಗಳನ್ನು ಹೊಂದಿದ್ದಾನೆಂದು ಶಾಸನಗಳಿಂದ ತಿಳಿದುಬರುತ್ತದೆ.

### ಚಿದ್ದದಂಡಾಧಿಪ

ಈತನ ಉಲ್ಲೇಖವು ಮುಳಗುಂದ[೭೧] ಶಾಸನದಲ್ಲಿ ಬರುತ್ತದೆ. ಶ್ರೀನಿಧಿ, ವಿವೇಕನಿಧಿ, ವಿದ್ಯಾನಿಧಿ, ಕುಲನಿಧಿ, ವೀರನಿಧಿ, ತೇಜೋನಿಧಿ, ದಯಾನಿಧಿ, ಕೀರ್ತಿ ಶ್ರೀನಿಧಿ, ಬುಧರ್ಗೆ ನವನಿಧಿ ಎಂಬ ಬಿರುದುಗಳಿಂದ ವರ್ಣಿತಗೊಂಡಿದ್ದಾನೆ. ಇವನನ್ನು 'ಮಹಾಪ್ರಧಾನಂ ಸೇನಾಧಿಪತಿ ದಣ್ಣನಾಯಕ ಜಿದ್ದರಸ' ಎಂದು ಕರೆಯಲಾಗಿದೆ.

### ಈಶ್ವರ

ಈತನ ಉಲ್ಲೇಖ ಹತ್ತಿಮತ್ತೂರ[೭೨] ಶಾಸನದಲ್ಲಿ ಬರುತ್ತದೆ. ವೈರಿಗಳು ಏರಿಬಂದ ಪ್ರಸಂಗದಲ್ಲಿ ವಿಕ್ರಮಾದಿತ್ಯನು ಇವನನ್ನು ಆಧರಿಸಿ 'ದವಳ ಶಂಖಮನಗ್ಗದ ಧ(ಕಿ)ಗಾಳೆಯಂ ಬಿರುದಿನ ನಾಮಮಂ ಕುರುಳಕಾನ್ತ ಮನೋಜ್ಞರ ವಾಕ್ಯ'ಗಳನ್ನು ಕೊಟ್ಟು ಗೌರವಿಸಿದನೆಂದು ಲಕ್ಷೇಶ್ವರ[೭೩] ಶಾಸನದಲ್ಲಿ ಬರುತ್ತದೆ. ಇನ್ನೊಂದು ಲಕ್ಷ್ಮೀಶ್ವರದ[೭೪] ಶಾಸನದಲ್ಲಿ ಈಶ್ವರನು ಚಾಳುಕ್ಯ ಚಕ್ರವರ್ತಿಯ ಮನೆವೆರ್ಗ್ಗಡೆ ಸೇನಾಧಿಪತಿನಾಗಿದ್ದನೆಂದು ಹೇಳಲಾಗಿದೆ.

### ಕನ್ನುಗಮಾತ್ಯ

ತೈಲಪನ ಅಂಕಕಾರನಾದ ಈತನ ವರ್ಣನೆ ಬೇಸೂರು[೭೫] ಶಾಸನದಲ್ಲಿಯೇ ಬರುತ್ತಿದ್ದು ತೈಲನ್ರಿಪಾಳನ ಆಜ್ಞೆಯ ಮೇರೆಗೆ ವೈರಿ ಬಲವನ್ನು ನಿರ್ಮೂಲನೆ ಮಾಡಿ 'ಬಿಲ್ಲಂಕಕಾರ'

